# ಶಿಲ್ಪಿ ಸಿಂಗಣ್ಣಾಚಾರ್ಯ

# SHILPI SINGANNACHARYA



ಕರ್ನಾಟಕ ಲಲಿತಕಲಾ ಅಕಾಡೆಮಿ KARNATAKA LALITHKALA ACADEMY



## ಜಿ.ವಿ. ಗಣೇಶಯ್ಯ

ಮೂಲತಃ ಚಿತ್ರಕಲಾವಿದನಾಗಬೇಕೆಂಬ ಹೆಬ್ಬಯಕೆಯಿಂದ ಶೃಂಗೇರಿಯ ಸಮೀಪದ ಹಳ್ಳಿಯೊಂದರಿಂದ ಮೈಸೂರಿಗೆ ಬಂದ ಜಿ.ವಿ.ಗಣೇಶಯ್ಯ ಚಿತ್ರಕಲೆಯಲ್ಲಿ ಸರ್ಕಾರಿ ಡಿಪ್ಲೊಮಾ ಪಡೆಯುವುದರ ಜೊತೆಗೆ ಛಾಯಾಗ್ರಹಣ, ವ್ಯಂಗ್ಯಚಿತ್ರಕಲೆ, ಸಂಗೀತ - ಇತ್ಯಾದಿ ಇತರ ಕಲಾ ಪ್ರಕಾರಗಳಿಂದಲೂ ಆಕರ್ಷಿತರಾಗಿ ಆ ನಿಟ್ಟಿನಲ್ಲೂ ಒಂದಿಷ್ಟು ಪರಿಶ್ರಮ ಪಡೆದಿದ್ದಾರೆ.

ಸಂಗೀತ, ಯಕ್ಷಗಾನ, ಚಿತ್ರಕಲೆ, ಭಾಷೆ, ಧರ್ಮ, ಪ್ರವಾಸ, ಇತ್ಯಾದಿ ಹಲವಾರು ವಿಚಾರಗಳ ಬಗ್ಗೆ ಇವರು ಬರೆದಿರುವ ಅನೇಕ ಲೇಖನಗಳು, ಸಣ್ಣ ಕತೆಗಳು, ನಗೆ ಬರಹಗಳು, ವ್ಯಂಗ ಚಿತ್ರಗಳು ಕನ್ನಡದ ಪ್ರತಿಷ್ಠಿತ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. "ನೀವೂ ವ್ಯಂಗ ಚಿತ್ರ ರಚಿಸಿ" ಎಂಬ ಇವರ ವ್ಯಂಗ ಚಿತ್ರಕಲೆಯನ್ನು ಕಲಿಯುವವರಿಗಾಗಿಯೇ ಬರೆದಿರುವ ವಿವರವಾದ ಮಾರ್ಗದರ್ಶಕ ಸಚಿತ್ರ ಲೇಖನ ಮಾಲೆಯೊಂದು ಸದ್ಯದಲ್ಲೇ ದಿನಪತ್ರಿಕೆಯೊಂದರಲ್ಲಿ ಧಾರಾವಾಹಿಯಾಗಿ ಪ್ರಕಟಗೊಳ್ಳಲಿದೆ. ಇವರ "ಸ್ಕ್ರೀನ್ ಪ್ರಿಂಟಿಂಗ್ ಕಲಿಯಿರಿ" ಎಂಬ ಹಸ್ತಪ್ರತಿಗೆ ಕರ್ನಾಟಕ ರಾಜ್ಯ ವಿಜ್ಞಾನ ಪರಿಷತ್ತಿನ 1989-90ನೇ ಸಾಲಿನ ಬಹುಮಾನ ದೊರೆತಿದೆ.

ಪ್ರಸ್ತುತ ಇವರು ಮೈಸೂರಿನ ಅಖಿಲ ಭಾರತ ವಾಕ್-ಶ್ರವಣ ಸಂಸ್ಥೆಯಲ್ಲಿ ಉದ್ಯೋಗದಲ್ಲಿದ್ದಾರೆ.

ಕರ್ನಾಟಕದ ಕಲಾವಿದರು : 26

# ಶಿಲ್ಪಿ ಸಿಂಗಣ್ಣಾಚಾರ್ಯ

ಜಿ.ವಿ. ಗಣೇಶಯ್ಯ

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು - 560 002

**SHILPI SINGANNACHARYA**
A Biography by G.V.Ganeshaiah,
Published By K.Mukundan, *Registrar*
Karnataka Lalithakala Academy
Nrupatunga Road, Bangalore - 560 002.

First impression: 1994

Copies: 1000

Price: Rs.10-00

General Editor : S.N.Chandrasekar



Printed at
***PRAGATHI PRINTS***
No. 618, 2nd Main, 2nd Cross,
NGEF Layout, Nrupathunganagar,
Bangalore - 560 072
✆ 3353536

# ಮೊದಲ ಮಾತು

ಕರ್ನಾಟಕ ಲಲಿತಕಲಾ ಅಕಾಡಮಿಯ ಪ್ರಮುಖ ಯೋಜನೆಗಳಲ್ಲಿ ರಾಜ್ಯದ ಹಿರಿಯ ಕಲಾವಿದರು ಮತ್ತು ಅವರ ಕೃತಿಗಳ ಬಗ್ಗೆ ಪುಸ್ತಕಗಳನ್ನು ಪ್ರಕಟಿಸಿರುವುದು ಒಂದು. ಈ ಪುಸ್ತಕಗಳು ಆ ಹೆಸರಾಂತ ಕಲಾವಿದರ, ಅವರ ಕಲೆಯ ಪರಿಚಯ ಮಾಡಿಸುವುದರ ಜೊತೆಗೆ ರಾಜ್ಯದಲ್ಲಿ ಕಲೆಯು ಬೆಳೆದು ಬಂದ ದಾರಿ ಮತ್ತು ಅವರ ಜೀವನ ಚರಿತ್ರೆಯ ತಿಳುವಳಿಕೆ ಉಂಟುಮಾಡಲು ಸಹಾಯವಾಗಬಲ್ಲದು.

ಈ ಯೋಜನೆಯಲ್ಲಿ ಈಗಾಗಲೇ ಇಪ್ಪತ್ತಾರು ಸಚಿತ್ರ ಸುಂದರ ಹೊತ್ತಿಗೆಗಳು ಹೊರಬಂದಿದೆ. ಈಗ, ಅಂದರೆ ೧೯೯೩ - ೯೪ರ ಸಾಲಿನಲ್ಲಿ ಹಲವಾರು ಹೊತ್ತಿಗೆಗಳು ಹೊರಬಂದಿದ್ದು, ಇನ್ನೂ ಒಂದೆರಡು ಸಿದ್ಧವಾಗುತ್ತಲಿವೆ. ಈಗ ಬಿಡುಗಡೆಯಾಗುತ್ತಿರುವ ಪುಸ್ತಕ ಹಿಂದಿನ ಮತ್ತು ಇಂದಿನ ಪೀಳಿಗೆಗೆ ಹಿರಿಯರಾದ ಸಿಂಗಣ್ಣಾಚಾರ್ಯ ಅವರನ್ನು ಕುರಿತದ್ದು. ಈ ಮಾಲೆ ಅತ್ಯಂತ ಜನಪ್ರಿಯವಾಗಿದ್ದು, ಈಗಾಗಲೇ ಕೆಲವು ಪುಸ್ತಕಗಳು ಪುನರ್ ಮುದ್ರಣವಾಗಿರುವುದು ಅವುಗಳ ಅವಶ್ಯಕತೆ, ಸಾರ್ಥಕತೆಗಳ ದ್ಯೋತಕ.

ಈ ಪುಸ್ತಕಗಳನ್ನು ರಚಿಸಲು ಆರಿಸಿರುವ ಬರಹಗಾರರು ಕಲೆಯ ವಿಷಯ ಮತ್ತು ಆಯಾ ಕಲಾವಿದರ, ಅವರ ಕಲಾ ವಿಲಾಸದ ಪ್ರತೀಕ. ಅವು ಆಯಾ ಕಲಾವಿದರ, ಆವರ ಕಾಲದ ಕಲಾ ಸಂಪತ್ತಿನ ವ್ಯಾಪ್ತಿಯನ್ನು ಅರಿಯಲು ಸಾಧಕವಾಗುವುದರಲ್ಲಿ ಸಂದೇಹವಿಲ್ಲ.

ಕಲಾವಿದರು, ಕಲಾ ರಸಿಕರು ಮತ್ತು ಸಾಹಿತ್ಯಾಭಿಮಾನಿಗಳು ಅಕಾಡೆಮಿಯ ಈ ಸಾಧನೆಯನ್ನು ಸ್ವಾಗತಿಸುವರೆಂದು ಆಶಿಸುತ್ತೇನೆ.

**ಪಿ.ಆರ್.ತಿಪ್ಪೇಸ್ವಾಮಿ**
ಅಧ್ಯಕ್ಷರು
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು.

# ಶಿಲ್ಪಿ ಸಿಂಗಣ್ಣಾಚಾರ್ಯ

'ಮೈಸೂರು' ಎಂದ ತಕ್ಷಣ ನಮಗೆ ನೆನಪಿಗೆ ಬರುವುದು ಭವ್ಯವಾದ ಮಹಾರಾಜರ ಅರಮನೆ, ಚಾಮುಂಡಿ ಬೆಟ್ಟ, ವೈಭಯುತವಾದ ಅದ್ದೂರಿಯ ನವರಾತ್ರಿಯ ಉತ್ಸವಗಳು. ಈ ನವರಾತ್ರಿಯ ಉತ್ಸವಗಳಲ್ಲೂ "ಕ್ಲೈಮ್ಯಾಕ್ಸ್" ಎನ್ನಬಹುದಾದಂತಹ ಕಾರ್ಯಕ್ರಮ ವಿಜಯದಶಮಿಯ ದಿನ ಮಹಾರಾಜರ ಜಂಬೂಸವಾರಿ. ಆ ಜಂಬೂಸವಾರಿ ಈಗ ಇಲ್ಲ; ಆದರೆ, ಆ ವೈಭವದ ನೆನಪು ಹಿರಿಯ ತಲೆಮಾರಿನವರಿಗಾದರೂ ಇದ್ದೀತು.

ಜಂಬೂ ಸವಾರಿಯ ಸಮಯದಲ್ಲಿ ಸಾಲಂಕೃತ ಆನೆ ಮೇಲೆ ಭವ್ಯವಾದ ಅಂಬಾರಿಯನ್ನಿರಿಸಿ, ಅದರ ಮೇಲೆ ಮಹಾರಾಜರು ಕುಳಿತುಕೊಂಡು ಅರಮನೆಯಿಂದ ಬನ್ನೀಮಂಟಪಕ್ಕೆ ವೈಭವಯುತವಾದ ಅದ್ದೂರಿಯ ಮೆರವಣಿಗೆಯಲ್ಲಿ ಸಾಗುವ ದೃಶ್ಯವನ್ನು ವರ್ಣಿಸಲು ಕಷ್ಟಸಾಧ್ಯ. ಆ ಮೆರವಣಿಗೆಯಲ್ಲಿ ಆನೆಯ ಮೇಲೆ ಇರಿಸಿರುವ ಮಹಾರಾಜರು ಮಂಡಿಸುವ, ಬೆಳಕಿಗೆ ಝುಗಝುಗಿಸುವ ಈ ಅಂಬಾರಿಯನ್ನು ನೋಡಲು "ಎರಡು ಕಣ್ಣುಗಳು ಸಾಲವು" ಎಂದರೆ

ಮಾಮೂಲೀ ಹೊಗಳಿಕೆಯ ಮಾತಾಗಿಬಿಡುತ್ತದೆ. ಆರು ಸಾವಿರ ತೊಲೆ (ಒಂದು ತೊಲೆಗೆ ಸುಮಾರು ಹತ್ತು ಗ್ರಾಂಗಳು) ಯಷ್ಟು ತೂಕದ ಬಂಗಾರದ ತೆಳುವಾದ ತಗಡಿನ ಹೊದ್ದಿಕೆಯಿಂದ ಕೂಡಿರುವ ಈ ಅನುಪಮವಾದ ಅಂಬಾರಿಯನ್ನು ಬಹಳ ಮೋಹಕವಾಗಿ ನಿರ್ಮಿಸಲಾಗಿದೆ. ಇದರ ನಾಲ್ಕು ಮೂಲೆಗಳಲ್ಲೂ ಮೂರುಮೂರರಂತೆ ಸುಂದರವಾದ ಕೆತ್ತನೆ ಕೆಲಸದಿಂದ ಅಲಂಕೃತವಾದ ಒಟ್ಟು ಹನ್ನೆರೆಡು ಕಂಬಗಳಿವೆ. ಮೇಲ್ಭಾಗದಲ್ಲಿ ಭವ್ಯವಾದ ಕಿರೀಟದ ರೀತಿಯ ಗೋಪುರವಿದೆ. ಅದರ ಮೇಲೆ ಪಂಚಕಲಶಗಳಿವೆ. ಅಲ್ಲದೆ, ಬೆಳ್ಳಿಯ ವರಸೆಯ ಕೆತ್ತನೆಯಿಂದ ಕಾಣ್ಮನತಣಿಸಿವ ಪೀಠ ಸಹಾ ಈ ಅಂಬಾರಿಯಲ್ಲಿದೆ ಎಂದರೆ ಅದರ ಭವ್ಯತೆಗೆ ಸಾಟಿಯಿದೆಯೇ ಎನಿಸದಿರದು.

ಮೈಸೂರು ಮಹಾ ಜರ ವೈಭವಕ್ಕೆ, ಶ್ರೀಮಂತಿಕೆಗೆ ಮೆರುಗನ್ನಿತ್ತಿರುವ ಇಂತಹ ಅನುಪಮವಾದ ಅಂಬಾರಿಯನ್ನು ನಿರ್ಮಿಸಿದ ಶಿಲ್ಪಿಯ ಬಗ್ಗೆ ಹೆಚ್ಚಿನವರು ತಲೆಕೆಡಿಸಿಕೊಳ್ಳುವುದಿಲ್ಲ. ಹಾಗಾಗಿ ಈ ಭವ್ಯ ನಿರ್ಮಾಣದ ಹಿಂದಿರುವ ಶಿಲ್ಪಿಯು ಅಜ್ಞಾತವಾಗಿಯೇ ಉಳಿದಿದ್ದಾರೆ ಎಂದರೆ ಉತ್ಪ್ರೇಕ್ಷೇ ಎನಿಸದು. ಈ ಶಿಲ್ಪಿಯೇ ಬಹು ಜನರಿಗೆ ಪರಿಚಿತರಲ್ಲದ ದಿವಂಗತ ಸಿಂಗಣ್ಣಾಚಾರ್ಯರು.

## ಯಾರು ಈ ಸಿಂಗಣ್ಣಾಚಾರ್ಯ?

ಸುಪ್ರಸಿದ್ಧ ಲೋಹಶಿಲ್ಪಿಗಳಾಗಿದ್ದ ಶ್ರೀ ಸಿಂಗಣ್ಣಾಚಾರ್ಯರು ಮೈಸೂರು ನಗರದವರೇ. ಇವರ ಮನೆಯು ಇರ್ವಿನ್ ರಸ್ತೆಯ ಪಂಚಮುಖಿ ಆಂಜನೇಯ ಸ್ವಾಮಿ ದೇವಸ್ಥಾನದ ಎದುರಿಗಿದ್ದ ಉನ್ನತವಾದ ಒಂದು ಸೌಧ. ಚಾಮರಾಜೇಂದ್ರ ಕಲಾ ಶಾಲೆ (ಈಗ ಕಾವಾ ಆಗಿದೆ)ಯಿಂದ ಇರ್ವಿನ್ ರಸ್ತೆಯ ಮೂಲಕ ಹಳೆಯ ಜನತಾ ಬಜಾರ್ ಕಡೆಗೆ ಸ್ವಲ್ಪ ದೂರ ಹೋದರೆ ಎಡಭಾಗದಲ್ಲಿ ಈ ಮನೆಯಿದೆ. ಎಸ್.ಎನ್.ಸ್ವಾಮಿ ಸೌಧವೆಂದೇ ಈ ಮನೆಯನ್ನು ಕರೆಯಲಾಗುತ್ತಿತ್ತು.

ಸ್ವಾಮಿ (ಎಸ್.ನರಸಿಂಹಸ್ವಾಮಿ)ಯವರು ಪದ್ಮಶ್ರೀ ವಿಜೇತ, ಕರ್ನಾಟಕದ ಖ್ಯಾತ ಚಿತ್ರಕಲಾವಿದರಾಗಿದ್ದರು. ಇವರು ಸಿಂಗಣ್ಣಾಚಾರ್ಯರ ಏಕೈಕ ಪುತ್ರರು.

ಶ್ರೀ ಸಿಂಗಣ್ಣಾಚಾರ್ಯರಿಗೆ ಲೋಹ ಶಿಲ್ಪಕಲೆಯು ವಂಶ ಪಾರಂಪರ್ಯವಾಗಿ ಬಂದುದಾಗಿತ್ತು. ಇವರ ತಂದೆ ನರಸಿಂಹಾಚಾರ್ಯರು ಹಾಗೂ ದೊಡ್ಡಪ್ಪನವರಾದ ಸಿಂಗಣ್ಣನವರು ಮೈಸೂರು ಅರಮನೆಯ ಶಿಲ್ಪಿಗಳಾಗಿ ಸೇವೆ ಸಲ್ಲಿಸಿದವರಾಗಿದ್ದರು. ತಿರುಪತಿ ವೆಂಕಟರಮಣಸ್ವಾಮಿಯನ್ನು ಅಲಂಕರಿಸಿರುವ ಕುಸುರಿ ಕೆಲಸದ ಸ್ವರ್ಣ ಛತ್ರಿಯನ್ನು ತಯಾರಿಸಿದ ಕೀರ್ತಿಗೆ ಇವರ ತಂದೆ ನರಸಿಂಹಾಚಾರ್ಯರು ಪಾತ್ರರಾದರೆ, ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರತಿಮೆಯನ್ನು ಬೆಳ್ಳಿಯಲ್ಲಿ ನಿರ್ಮಿಸಿದ ಕೀರ್ತಿಯು ದೊಡ್ಡಪ್ಪ ಸಿಂಗಣ್ಣನವರಿಗೆ ಸಲ್ಲುತ್ತದೆ. ಸಿಂಗಣ್ಣಾಚಾರ್ಯರ ಪೂರ್ವಿಕರಾದ ಈ ಇಬ್ಬರೂ ತಮ್ಮ ಕಲಾಪ್ರೌಢಿಮೆಯಿಂದ ಮನೆತನದ ಕೀರ್ತಿ ಗೌರವಗಳನ್ನು ಅಚ್ಚಳಿಯದಂತೆ ಮಾಡಿರುತ್ತಾರೆ.

## ಬಾಲ್ಯ

ವ್ಯಕ್ತಿಯೊಬ್ಬನ ಬಾಲ್ಯದಲ್ಲಿ ಯಾವ ವಿಚಾರವು ಕಣ್ಣಿಗೆ ಯಾವಾಗಲೂ ಬೀಲುತ್ತಿರುವುದೋ ಆ ವಿಚಾರದಲ್ಲಿ ಆತನಿಗೆ ಸುಲಭವಾಗಿ ಆಸಕ್ತಿಬೆಳೆಯತೊಡಗುವುದು ಸ್ವಾಭಾವಿಕ. ಎಂದರೆ ಪರಿಸರವು ವ್ಯಕ್ತಿಯ ಮೇಲೆ ಗಾಢ ಪ್ರಭಾವ ಬೀರುತ್ತದೆ.

ಸಿಂಗಣ್ಣಾಚಾರ್ಯರು ಬಾಲ್ಯದಲ್ಲಿ ಕಲಾಪರಿಸರದಲ್ಲಿ ಬೆಳೆದವರು. ಜೊತೆಗೆ ಲೋಹ ಶಿಲ್ಪಕಲೆಯಿಂದ ಹಾಸು ಹೊಕ್ಕಾದಂತಹ ಮನೆತನ ಬೇರೆ ಅವರದಾಗಿತ್ತು. ಹೀಗಾಗಿ ಸ್ವಾಭಾವಿಕವಾಗಿಯೇ ಅವರಿಗೆ ಲೋಹ ಶಿಲ್ಪಕಲೆಯ ನಂಟು ಅಂಟಿಕೊಂಡಿತು.

ಮೈಸೂರಿನ ಸಯ್ಯಾಜಿರಾವ್ ರಸ್ತೆಯಲ್ಲಿರುವ ಈಗಿನ ಕಾವಾದ (ಚಾಮರಾಜೇಂದ್ರ ಕಲಾ ಶಾಲೆ) ಕಟ್ಟಡವಿರುವ ಸ್ಥಳದಲ್ಲಿ ಹಿಂದೊಮ್ಮೆ ಕಲೆಯನ್ನೇ ನಂಬಿ ಜೀವಿಸುತ್ತಿದ್ದ ವಿಶ್ವಕರ್ಮ ಜನಾಂಗದ ಕೇರಿಯಿದ್ದಿತಂತೆ. ಆ ಕೇರಿಯಲ್ಲೇ ಸಿಂಗಣ್ಣಾಚಾರ್ಯರ ತಂದೆ ನರಸಿಂಹಾಚಾರ್ಯರ ಮನೆಯೂ ಇದ್ದಿತಂತೆ. ತಂದೆಯು ಮಗನನ್ನು ಉತ್ತಮ ಶಿಲ್ಪಿಯನ್ನಾಗಿ ರೂಪಿಸಬೇಕೆಂದು ಮೊದಲಿನಿಂದಲೂ ಕನಸು ಕಾಣುತ್ತಿದ್ದರು. ಜೊತೆಗೆ ಅವರ ತಾಯಿಯವರೂ ಮಗನ ಮನಃಪ್ರವೃತ್ತಿಗೆ ಯಾವುದೇ ವಿಧವಾದ ಅಡ್ಡಿಯನ್ನುಂಟು ಮಾಡದೆ ಪ್ರೋತ್ಸಾಹಿಸುತ್ತಲೂ ಇದ್ದರು. ಹೀಗಾಗಿ ಸಿಂಗಣ್ಣಾಚಾರ್ಯರ ಶಿಲ್ಪಕಲಾ ಶಾಲೆಯು ಅವರ ಮನೆಯೇ ಆಯಿತು. ಅವರು ತಮ್ಮ ಬಾಲ್ಯವನ್ನು ವ್ಯರ್ಥಗೊಳಿಸಿಕೊಳ್ಳದೆ ಕಲಾಭ್ಯಾಸದಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇವರ ಮನೆಯ ಸುತ್ತಮುತ್ತಲೂ ಒಂದಲ್ಲಾ ಒಂದುಬಗೆಯ ಕಲಾವಿದರು ಇದ್ದುದು ಇವರ ಲೋಹಶಿಲ್ಪಕಲಾ ಕಲಿಕೆಗೆ ಉತ್ತೇಜಕ ವಾತಾವರಣದ ಸೃಷ್ಟಿಗೆ ಕಾರಣವಾಗಿದ್ದಿರಲೂಬಹುದು.

## ನಾಟಕದ ಗೀಳು

ಚಿಕ್ಕವಯಸ್ಸಿನಲ್ಲಿ ಸಾಮಾನ್ಯವಾಗಿ ತಾನು ಕಾಣುವ ಜನಪ್ರಿಯವಾದ ಕ್ಷೇತ್ರಗಳಲ್ಲಿ ಮನಸ್ಸು ನೆಡುವ ಸಂಭವವಿರುತ್ತದೆ. ಅದರಲ್ಲೂ ಕ್ರಿಯಾತ್ಮಕ ಮನೋಭಾವದ ಜನರಲ್ಲಿ ಇದು ಹೆಚ್ಚು. ಸಿಂಗಣ್ಣಾಚಾರ್ಯರೂ ಇದಕ್ಕೆ ಹೊರತಾಗಿರಲಿಲ್ಲ. ತಮ್ಮ ಎಂಟನೆಯ ವಯಸ್ಸಿನಲ್ಲಿ ಇವರು ನಾಟಕಕಲೆಯ ಸೆಳೆತಕ್ಕೆ ಒಳಗಾದರು. ಮೈಸೂರಿನ ದೊಡ್ಡಪೇಟೆ (ಈಗಿನ ಅಶೋಕ ರಸ್ತೆ)ಯಲ್ಲಿ ಅದೇತಾನೆ ನಾಟಕ ಕಲಾಸಂಘವೊಂದು ಸ್ಥಾಪನೆಗೊಂಡಿತ್ತು. ಆ ಸಂಘವನ್ನು ಸೇರಿಕೊಂಡು ಸಿಂಗಣ್ಣಾಚಾರ್ಯರು ನಾಟಕಗಳಲ್ಲೂ ಪಾತ್ರವಹಿಸುವ ಸಾಹಸವನ್ನೂ ಮಾಡಿದರು. ಅಷ್ಟೇ ಅಲ್ಲ, ನಾಟಕ ಕ್ಷೇತ್ರದಲ್ಲಿ ಕೂಡ ಇವರು ಸಾಕಷ್ಟು

ಯಶಸ್ಸನ್ನೂ ಸಂಪಾದಿಸಿರೆನ್ನಬೇಕು. ಏಕೆಂದರೆ, ಇವರ ಅಭಿನಯ ಕಲೆಯನ್ನು ನೋಡಿದವರು ಮೆಚ್ಚಿ ಬೆನ್ನು ತಟ್ಟಿದರು. ಆ ಕಾಲದ ಕ್ರೈಸ್ತ ಪತ್ರಿಕೆಯೊಂದು ಇವರ ಭಾವ ಚಿತ್ರವನ್ನೂ ಪ್ರಕಟಿಸಿ, ಇವರ ಅಭಿನಯ ಕೌಶಲ್ಯವನ್ನೂ ಮುಕ್ತಕಂಠದಿಂದ ಪ್ರಶಂಶಿಸಿತ್ತು.

## ಸಂಸಾರ ಸಾಗರದಲ್ಲಿ

ಸಿಂಗಣ್ಣಾಚಾರ್ಯರು ತಮ್ಮ ಹತ್ತನೆಯ ವಯಸ್ಸಿನಲ್ಲಿ ತಂದೆಯವರನ್ನು ಕಳೆದುಕೊಂಡರು. ಆಟ-ಪಾಠಗಳಲ್ಲಿ ಮಗ್ನವಾಗಿರಬೇಕಾದ ಇಂತಹ ಎಳೆಯ ವಯಸ್ಸಿನಲ್ಲಿಯೇ ಇವರಿಗೆ ಇಡೀ ಸಂಸಾರದ ಹೊರೆ ಹೆಗಲಿಗೇರಿತು.

ನಾಟಕಗಳಲ್ಲಿ ಪಾತ್ರವಹಿಸುವುದು ಅಂತಹ ಲಾಭತರುವ ವೃತ್ತಿಯಲ್ಲ; ಅದರಿಂದ ಜೀವನ ನಿರ್ವಹಣೆಯೂ ಕಷ್ಟಸಾಧ್ಯವೆಂಬುದನ್ನರಿತ ಸಿಂಗಣ್ಣಾಚಾರ್ಯರ ತಾಯಿಯವರು ಮಗನಿಗೆ ಆ ಕಲೆಯಲ್ಲಿ ಮುಂದುವರಿಯಲು ಅವಕಾಶ ಕೊಡಲಿಲ್ಲ. ನಾಟಕದ ಸಹವಾಸವನ್ನು ಬಿಟ್ಟರೆ ಮುಂದೇನು ಮಾಡಬೇಕೆನ್ನುವ ಪ್ರಶ್ನೆ ಏನೂ ಸಿಂಗಣ್ಣಾಚಾರ್ಯರಿಗೆ ಎದುರಾಗುವ ಸಂಭವವೇ ಇರಲಿಲ್ಲ. ಹೇಗೂ ವಂಶಪಾರಂಪರ್ಯವಾಗಿ ಬಂದ ಲೋಹ ಶಿಲ್ಪಕಲೆಯು ಇವರಿಗೆ ಕರಗತವಾಗಿತ್ತಷ್ಟೆ. ಅದನ್ನೇ ಮುಂದುವರಿಸತೊಡಗಿದರು.

## ಮನವೆಂಬ ಮರ್ಕಟ

ಸಿಂಗಣ್ಣಾಚಾರ್ಯರ ಮನಸ್ಸು ಒಂದೇ ಕಡೆ ಕೇಂದ್ರಿಕೃತಗೊಳ್ಳದೆ ಅತ್ತ-ಇತ್ತ ಕೊನೆದಾಡುತ್ತಲೇ ಇದ್ದಹಾಗೆ ತೋರೂತ್ತದೆ. ಜೀವನೋಪಾಯಕ್ಕಾಗಿ ಲೋಹ ಶಿಲ್ಪಕಲೆಯಲ್ಲೇನೋ ಸಿಂಗಣ್ಣಾಚಾರ್ಯರು ತಮ್ಮನ್ನು ತೊಡಗಿಸಿಕೊಂಡಿದ್ದರು. ಆದರೆ, ಅದೇ ವೇಳೆಯಲ್ಲಿ ಅವರು ಆಗಾಗ ಬಿಡುವು ಮಾಡಿಕೊಂಡು ಸಂಗೀತ ಕಲೆಯ

ಅಭ್ಯಾಸದಲ್ಲೂ ತೊಡಗಿದರು. ಸಂಗೀತ ವಿದ್ವಾನ್ ಶ್ರೀ ಚನ್ನಂಜಪ್ಪ ಹಾಗೂ ತಂಜಾವೂರಿನ ಕೃಷ್ಣಸ್ವಾಮಿ ಈ ಇಬ್ಬರು ವಿದ್ವಾಂಸರುಗಳ ಬಳಿ ಶ್ರೀಯುತರು ಸಂಗೀತಾಧ್ಯಯನ ನಡೆಸಿದ್ದುದಾಗಿ ತಿಳಿದುಬರುತ್ತದೆ. ಸಂಸಾರದ ಹೊರೆಯನ್ನು ಹೊತ್ತ ವ್ಯಕ್ತಿಗೆ ಜೀವನೋಪಾಯದ ವೃತ್ತಿಯೊಂದನ್ನು ಬಿಟ್ಟು ಆಸಕ್ತಿ ಕೆರಳಿಸಿದ ಇತರ ವಿದ್ಯೆಗಳನ್ನು ಕಲಿತು ಉನ್ನತಿಗೇರುವುದು. ಕಷ್ಟಕರವಾದ ಕೆಲಸ. ಹಾಗೆ ಇತರ ವಿದ್ಯೆಗಳಲ್ಲಿ ಆಸಕ್ತಿ ಬೆಳೆಸಿಕೊಂಡು ಕಲಿಯಲು ಹೋದಾತ ಭ್ರಮನಿರಸನಗೊಂಡರೆ ಆಶ್ಚರ್ಯವಿಲ್ಲ. ಯಾಕೆ ಹೀಗಾಗುತ್ತದೆಂದರೆ ಮೊದಲನೆಯದಾಗಿ ಅಭ್ಯಾಸಕ್ಕೆ ಸಮಯದ ಅಭಾವ. ಮನಸ್ಸನ್ನು ಕೇಂದ್ರೀಕರಿಸಲು ಸಂಸಾರದ ಕಿರಿಕಿರಿ.

ಹೀಗಾಗಿಯೇ ಏನೋ ಸಿಂಗಣ್ಣಾಚಾರ್ಯರ ಸಂಗೀತದ ಗೀಳು ಕ್ರಮೇಣ ಕಡಿಮೆಯಾಯಿತು. ಆದರೆ, ಆ ಜಾಗದಲ್ಲಿ ಆಧ್ಯಾತ್ಮದಲ್ಲಿ ಆಸಕ್ತಿ ಹುಟ್ಟಿಕೊಂಡಿತು. ಆಧ್ಯಾತ್ಮದ ಜೊತೆಯಲ್ಲೇ ಶಿಲ್ಪಕಲೆಯಲ್ಲೂ ಸಿಂಗಣ್ಣಾಚಾರ್ಯರ ಆಸಕ್ತಿ ಬೆಳೆಯುತ್ತಾ ಹೋಯಿತು.

ಹೀಗೆ ಈ ಎರಡೂ ವಿದ್ಯೆಗಳೂ ಒಂದಕ್ಕೊಂದು ಪೂರಕವಾಗಲು ಕಾರಣವೂ ಇದೆ. ನಮ್ಮಲ್ಲಿ ಶಿಲ್ಪಕಲೆಗೂ ಆಧ್ಯಾತ್ಮಕ್ಕೂ ಬಹು ಪುರಾತನ ಕಾಲದಿಂದಲೂ ಒಂದು ರೀತಿಯ ನಿಕಟ ಸಂಬಂಧವಿರುವುದನ್ನು ಗುರುತಿಸಬಹುದು. ಶಿಲ್ಪಕಲೆಯ ಪರಮ ಗುರಿಯೇ ಪುರಾಣೋಕ್ತ ದೇವ-ದೇವಿಯರ ಸುಂದರವಾದ ಮೂರ್ತಿಗಳನ್ನು ಕಡೆಯುವುದಾಗಿದೆ. ನಮ್ಮ ಯಾವುದೇ ದೇವಾಲಯವನ್ನು ಗಮನಿಸಿದರೂ ಮೇಲ್ನೋಟದಲ್ಲೇ ಈ ಮಾತಿನ ಸತ್ಯತೆಯ ಅರಿವಾಗುತ್ತದೆ. ಒಟ್ಟಿನಲ್ಲಿ ಶಿಲ್ಪಕಲೆ ಎಂದರೆ ಸಿಂಗಣ್ಣಾಚಾರ್ಯರ ಕಾಲದಲ್ಲಿದ್ದ ಸಾಮಾನ್ಯ ನಂಬಿಕೆಯ ಸಂದರ್ಭದಲ್ಲಿ ಹೇಳುವುದಾದರೆ, ದೇವರ ಪ್ರಮಾಣಬದ್ಧ ಮೂರ್ತಿಗಳನ್ನು ಸುಂದರವಾಗಿ, ಸಾಲಂಕೃತವಾಗಿ ಕಡೆಯುವುದು ಎಂದೇ ಅರ್ಥೈಸಬಹುದೇನೋ.

ಶಿಲ್ಪಕಲಾ ಜ್ಞಾನದ ಜೊತೆಗೆ ಆಧ್ಯಾತ್ಮ ಜ್ಞಾನವೂ ಇರುವ ಶಿಲ್ಪಿಯು ಸಹಜವಾಗಿಯೇ ಸಮರ್ಪಣಾ ಮನೋಭಾವದಿಂದ, ಭಯ-ಭಕ್ತಿಗಳಿಂದ ಭಾವುಕನಾಗಿ ದೇವತಾ ಮೂರ್ತಿಗಳನ್ನು ಕಡೆಯುತ್ತಾನೆ. ಹೀಗೆ ರೂಪುಗೊಳ್ಳುವ ದೇವತಾ ಮೂರ್ತಿಗಳು ಅಲೌಕಿಕವೆನಿಸುವ ರೂಪಲಾವಣ್ಯಗಳಿಂದ ಕೂಡಿರುವುದನ್ನು ನಾವು ಕಾಣಬಹುದು. ಸಿಂಗಣ್ಣಾಚಾರ್ಯರ ಕಥೆಯೂ ಮೇಲೆ ವಿವರಿಸಿದುದಕ್ಕಿಂತ ಬೇರೆಯದೇನಲ್ಲ. ಆಧ್ಯಾತ್ಮಿಕ ಜೀವನವು ಆರಂಭವಾದ ಮೇಲೆ ಇವರು ಬಾಹ್ಯ ಸಂಪರ್ಕವನ್ನು ಕ್ರಮೇಣ ಕಡಿಮೆಮಾಡಿಕೊಳ್ಳುತ್ತಾ ಬಂದರು. ಜೊತೆಗೆ ಪುರಾಣ ಶ್ರವಣ, ಏಕಾಂತದಲ್ಲಿ ಶಿಲ್ಪಕಲಾಭ್ಯಾಸ-ಇತ್ಯಾದಿಗಳಲ್ಲಿ ಸಂಪೂರ್ಣವಾಗಿ ತಮ್ಮನ್ನು ತೊಡಗಿಸಿಕೊಂಡರು.

## ಸಹಾಯ ಹಸ್ತ

ಸಿಂಗಣ್ಣಾಚಾರ್ಯರ ತಂದೆಯವರು ಸ್ವರ್ಗಸ್ಥರಾದಮೇಲೆ ಇವರು ತೀರಾ ಅನಾಥರಾಗೇನೂ ಉಳಿಯುವ ಪರಿಸ್ಥಿತಿ ಬರಲಿಲ್ಲ. ಇವರ ನೆರವಿಗೆ ಬಂಧುಗಳಾದ ಚಲುವಾಚಾರ್ಯರು ಮುಂದೆ ಬಂದರು.

ಅರಮನೆಯ ಶಿಲ್ಪಿಗಳಾಗಿದ್ದ ದೊಡ್ಡಪ್ಪ ಸಿಂಗಣ್ಣನವರೊಂದಿಗೆ ಸಿಂಗಣ್ಣಾಚಾರ್ಯರೂ ತಮ್ಮ ಹನ್ನೆರಡೆಯ ವಯಸ್ಸಿನಲ್ಲಿಯೇ ಅರಮನೆಗೆ ಹೋಗಿ ಕೆಲಸ ಮಾಡಿ ಬರುತ್ತಿದ್ದರು. ಹೀಗಾಗಿ ಚಿಕ್ಕಂದಿನಿಂದಲೂ ಅರಮನೆಯ ಸಂಪರ್ಕ ಇವರಿಗುಂಟಾಯಿತು. ಆದ್ದರಿಂದ ಇವರ ತಂದೆಯ ಕೆಲಸವೇ ಇವರಿಗೂ ದೊರಕಿತು. ಇದರಿಂದ ಜೀವನ ನಿರ್ವಹಣೆಗೆ ದಾರಿಯಾದುದರ ಜೊತೆಗೆ ಶ್ರದ್ಧಾಪೂರ್ವಕವಾಗಿ ಶಿಲ್ಪಕಲಾಧ್ಯಯನ ಕೈಗೊಳ್ಳಲು ಅನುಕೂಲವಾಯಿತು. ಇದೇ ಸಂದರ್ಭದಲ್ಲಿ ಅರಮನೆಯಲ್ಲಿ ಬೆಳ್ಳಿಯ ಬಾಗಿಲುವಾಡ ಒಂದನ್ನು ತಯಾರಿಸಬೇಕಾಗಿ ಬಂದಿತು. ಆಗಿನ ಕಾಲದ ಮೈಸೂರಿನ ಅಗ್ರಗಣ್ಯ ಶಿಲ್ಪಿಗಳ ಜೊತೆಯಲ್ಲಿ ಬಾಲಕ ಸಿಂಗಣ್ಣಾಚಾರ್ಯರೂ ಕೆಲಸ ಮಾಡುವ

ಸದವಕಾಶ ದೊರಕಿತು. ಇದರಿಂದಾಗಿ ಅವರು ಹೆಚ್ಚಿನ ಪರಿಶ್ರಮ ಪಡೆಯಲು ಅನುಕೂಲವಾಯಿತು. ಈ ನಡುವೆ ಆಚಾರ್ಯರಿಗೆ ಅವರ ಹದಿನಾರನೇ ವಯಸ್ಸಿನಲ್ಲಿ ವಿವಾಹವೂ ಜರುಗಿ ಗೃಹಸ್ಥಾಶ್ರಮವನ್ನು ಪ್ರವೇಶಿಸಿದರು.

ಸಿಂಗಣ್ಣಾಚಾರ್ಯರ ತಾಯಿಯವರಿಗೆ ಮೊದಲಿನಿಂದಲೂ ವೇದಾಂತ, ಪುರಾಣ ಪುಣ್ಯಕಥೆಗಳಲ್ಲಿ ಹೆಚ್ಚಿನ ಆಸಕ್ತಿಯಿದ್ದಿತು. ಆಚಾರ್ಯರಿಗೆ ಈ ದಿಸೆಯಲ್ಲಿ ಅಭಿರುಚಿಯುಂಟಾಗಲೂ ಅವರ ತಾಯಿಯೇ ಕಾರಣವೆನ್ನಬಹುದು. ಛತ್ರಪತಿ ಶಿವಾಜಿ ಮಹಾರಾಜರಿಗೆ ತಾಯಿ ಜೀಜಾಬಾಯಿಯು ಹೇಗೆ ಆದರ್ಶವೂ, ಗುರುವೂ ಆಗಿದ್ದು ಅವರ ಬಾಳನ್ನು ರೂಪಿಸಿ ಉಜ್ವಲಗೊಳಿಸಿದಳೋ ಹಾಗೆಯೇ ಸಿಂಗಣ್ಣಾಚಾರ್ಯರ ತಾಯಿಯೂ ಮಗನ ಏಳಿಗೆಗೆ ನೆರವಾದರೆನ್ನಬಹುದು. ಎಷ್ಟೋ ಪ್ರತಿಭಾವಂತರ ಏಳಿಗೆಯ ಹಿನ್ನೆಲೆಯಲ್ಲಿ ತಾಯಿಯಾದವಳ ಕೈವಾಡವಿರುವುದು ಅಪರೂಪವೇನಲ್ಲ.

1900ರ ಸಮಯದಲ್ಲಿ ಒಮ್ಮೆ ಬೆಂಗಳೂರಿನ ಸುಪ್ರಸಿದ್ಧ ವೇದಾಂತಿ ಸಹಜಾನಂದ ಸ್ವಾಮಿಗಳು ಮೈಸೂರಿನ ನಜರ್‌ಬಾದಿನ ಕಾಳಪ್ಪನವರ ಮಠದಲ್ಲಿ ಕಾರ್ಯಾರ್ಥವಾಗಿ ಬಂದು ತಂಗಿದ್ದರು. ಈ ವಿಚಾರವನ್ನರಿತ ಸಿಂಗಣ್ಣಾಚಾರ್ಯರು ಸಹಜಾನಂದ ಸ್ವಾಮಿಗಳ ಬಳಿಗೆ ಆಗಾಗ ಹೋಗಿ, ವೇದಾಂತದ ವಿಷಯದಲ್ಲಿ ಚರ್ಚೆ ನಡೆಸುವುದರ ಮೂಲಕ ತಮ್ಮ ಜ್ಞಾನದಾಹವನ್ನು ತಣಿಸಿಕೊಂಡು ಬರುತ್ತಿದ್ದರಂತೆ. ಹೀಗೆ, ಒಂದೆಡೆಯಲ್ಲಿ ತಾಯಿಯವರಿಂದಲೂ, ಇನ್ನೊಂದೆಡೆಯಲ್ಲಿ ಗುರು-ಹಿರಿಯರಿಂದಲೂ ಆಚಾರ್ಯರು ವೇದಾಂತದ ಸಾರವನ್ನು ಸಂಗ್ರಹಿಸಿಕೊಂಡು ತಮ್ಮ ಬಾಳನ್ನು ರೂಪಿಸಿಕೊಳ್ಳುತ್ತಾ ಬಂದಿದ್ದರು. ಆಚಾರ್ಯರು ಬದುಕಿದ್ದಾಗ ಇರ್ವಿನ್ ರಸ್ತೆಯಲ್ಲಿದ್ದ ಇವರ ಮನೆಗೆ ಹೋದವರು ಇವರ ಕೊಠಡಿಯಲ್ಲಿದ್ದ ನೂರಾರು ವೇದಾಂತ ಗ್ರಂಥಗಳನ್ನು ಕಾಣಬಹುದಿತ್ತು.

ಇಂತಹ ಆಧ್ಯಾತ್ಮಿಕ ವಾತಾವರಣದ ಕಾರಣದಿಂದಾಗಿ ಇವರ ಜೀವನವು ಋಜು ಮಾರ್ಗದಿಂದ ಕೂಡಿದ್ದು ನಿಷ್ಠಾಪೂರ್ಣವಾಗಿದ್ದಿತು. ತಾವು ಶಿಲ್ಪಕಲೆಯಲ್ಲಿ ಶ್ರದ್ಧಾಭಕ್ತಿಗಳನ್ನು ಹೆಚ್ಚಿಸಿಕೊಳ್ಳುವುದಕ್ಕೆ ತಮ್ಮ ಈ ಆಧ್ಯಾತ್ಮಿಕ ಅಧ್ಯಯನವೇ ಕಾರಣವೆಂದು ಆಚಾರ್ಯರು ಅಭಿಪ್ರಾಯಪಡುತ್ತಿದ್ದರು. ಇದು ನಿಜ ಕೂಡ. ಯಾಕೆಂದರೆ ನಮ್ಮಲ್ಲಿ ಲೋಹಶಿಲ್ಪಕಲೆಗೆ ಮೂಲಪುರುಷ ದೇವ ಶಿಲ್ಪಿ ವಿಶ್ವಕರ್ಮ ತಾನೇ? ಎಂದ ಮೇಲೆ ನಮ್ಮ ಭಾರತೀಯ ನಂಬಿಕೆಯಂತೆ ದೇವರನ್ನು ಅರ್ಥಾತ್ ಆಧ್ಯಾತ್ಮವನ್ನು ಬಿಟ್ಟು ಶಿಲ್ಪಕಲೆಯೇ ಇಲ್ಲ.

## ಮಾತೃವಿಯೋಗ

ಮಾನವನ ಜೀವನದಲ್ಲಿ ಘಟಿಸುವ ಯಾವುದಾದರೊಂದು ಮಹತ್ವದ ಘಟನೆಯು ಆತನ ಜೀವನದ ದಿಕ್ಕನ್ನೇ ಬದಲಿಸಲು ಸಮರ್ಥವಾಗಲೂಬಹುದು.

ಆಚಾರ್ಯರು ಇಪ್ಪತ್ತೆಂಟರ ಯುವಕರಾಗಿದ್ದಾಗಲೇ ಅವರ ತಾಯಿಯವರೂ ಸ್ವರ್ಗಸ್ಥರಾದರು. ಈ ಆಘಾತವು ಆಚಾರ್ಯರ ಮನಸ್ಸಿನ ಮೇಲೆ ಆಳವಾದ ಘಾಸಿಯನ್ನು ಮಾಡಿದಹಾಗೆ ತೋರುತ್ತದೆ. ವಾತ್ಸಲ್ಯಮಯಿ ತಾಯಿಯ ಅಗಲಿಕೆಯಿಂದ ತತ್ತರಿಸಿದ ಇವರಿಗೆ ಜೀವನದಲ್ಲಿ ತೀವ್ರ ಜಿಗುಪ್ಸೆಯುಂಟಾಯಿತು. ದೇಶಾಟನೆಯಿಂದಲಾದರೂ ಮನಸ್ಸಿಗಾದ ಘಾಸಿಯು ಮಾಯವಾಗ ಬಹುದೆಂದುಕೊಂಡ ಆಚಾರ್ಯರು ಮೈಸೂರನ್ನು ತೊರೆದು ಹುಬ್ಬಳ್ಳಿಯ ದಾರಿ ಹಿಡಿದರು. ಅಲ್ಲಿ ಶ್ರೀ ಸಿದ್ಧಾರೂಢಸ್ವಾಮಿಗಳ ಸನ್ನಿಧಿಯಲ್ಲಿ ಅವರು ಆಧ್ಯಾತ್ಮ ಸಾಧನೆ ಮಾಡುತ್ತಾ ನಿಂತುಬಿಟ್ಟರು.

ಸಿಂಗಣ್ಣಾಚಾರ್ಯರು ಹುಬ್ಬಳ್ಳಿಯ ಮಠವೊಂದರಲ್ಲಿ ಹೋಗಿ ಸೇರಿಕೊಂಡಿರುವ ವಿಚಾರವನ್ನು ತಿಳಿದು ವ್ಯಾಕುಲಗೊಂಡ ಇವರ

ಬಂಧುಗಳು ಹುಬ್ಬಳ್ಳಿಗೆ ಹೋಗಿ ಅವರನ್ನು ವಿವಿಧ ರೀತಿಯಲ್ಲಿ ಸಮಾಧಾನಗೊಳಿಸಿ ಬಹು ಕಷ್ಟದಿಂದ ಹಿಂದಕ್ಕೆ ಮೈಸೂರಿಗೆ ಕರೆತಂದರು. ಇಷ್ಟು ಹೊತ್ತಿಗಾಗಲೇ ಸಿಂಗಣ್ಣಾಚಾರ್ಯರು ಅರಮನೆಯ ಕೆಲಸಕ್ಕೆ ಹೋಗಿ ಎರಡು-ಮೂರು ತಿಂಗಳ ಮೇಲಾಗಿತ್ತು. ಆದರೆ, ಇವರ ಹಿತೈಷಿಗಳಾಗಿದ್ದ ಅರಮನೆಯ ಖಜಾನೆ ಮೊಖ್ತೇಸರರು ಅವರ ವೃತ್ತಿಗೆ ತೊಂದರೆಬಾರದ ಹಾಗೆ ಸೂಕ್ತಕ್ರಮ ತೆಗೆದುಕೊಂಡಿದ್ದರಿಂದಾಗಿ ಅರಮನೆಯ ಕೆಲಸ ಉಳಿದುಕೊಂಡಿತು.

ಹುಬ್ಬಳ್ಳಿಯಿಂದ ಮೈಸೂರಿಗೆ ಹಿಂದಿರುಗಿದ ಮೇಲೆ ಸಿಂಗಣ್ಣಾಚಾರ್ಯರ ಜೀವನದಲ್ಲಿ ಒಂದು ರೀತಿಯ ನೆಮ್ಮದಿ, ಸ್ಥಿರತೆ ನೆಲೆಸಿತು. ಒಂದೆಡೆಯಲ್ಲಿ ಸ್ಥಿರವಾಗಿ ನಿಂತು, ತಮ್ಮನ್ನು ಸಂಪೂರ್ಣವಾಗಿ ತೊಡಗಿಸಿಕೊಳ್ಳಬೇಕೆಂಬ ಮನಸ್ಸು ಮಾಡಿದರು

ಮದರಾಸಿನ ಕಲಾಶಾಲೆಯಲ್ಲಿ ಆಕೃತಿರಚನೆಯಲ್ಲಿ ಹೆಚ್ಚಿನ ಪರಿಣತಿ ಪಡೆಯಲೆಂದು ಸಿಂಗಣ್ಣಾಚಾರ್ಯರನ್ನೂ ಅರಮನೆಯ ವತಿಯಿಂದ ಕಳಿಸಲಾಯಿತು. ಆದರೆ, ಅಲ್ಲಿ ಹೊಸದಾಗಿ ಕಲಿಯಬೇಕಾದುದ್ದು ಏನೂ ಇದ್ದಂತೆ ಇವರಿಗೆ ತೋರಲಿಲ್ಲ. ಬದಲಾಗಿ ಇವರಿಗೆ ಕಹಿ ಅನುಭವವು ಕಾದಿತ್ತು. ಇವರ ಕೈಚಳಕ, ಕಲಾಪ್ರತಿಭೆಗಳಿಗೆ ಬೆರಗಾದ ಅಲ್ಲಿಯ ಅಂದಿನ ಮುಖ್ಯಾಧಿಕಾರಿಗಳು ಇವರನ್ನು ಪ್ರೋತ್ಸಾಹಿಸುವುದಕ್ಕೆ ಬದಲಾಗಿ, ಅಸೂಯೆಯಿಂದ ಕುದಿಯ ತೊಡಗಿದರಂತೆ!ಹೀಗಾಗಿ ಆಚಾರ್ಯರು ಕೆಲವೇ ತಿಂಗಳಲ್ಲಿ ಮದರಾಸಿಗೆ ವಿದಾಯ ಹೇಳಿ ಹಿಂದಿರುಗುವಂತಾಯಿತು. ಸಮಾನ ವೃತ್ತಿಯ ಜನರ ನಡುವೆ ಅಸೂಯೆಯು ಹೊಸದೇನೂ ಅಲ್ಲವಷ್ಟೆ. ಇದಕ್ಕೆ ಅಪವಾದವೂ ಇರುವುದುಂಟು.

ಮದರಾಸಿನಿಂದ ಮೈಸೂರಿಗೆ ಬಂದ ಮೇಲೆ ನಂಜನಗೂಡಿನ ಶ್ರೀ ನಂಜುಂಡೇಶ್ವರ ದೇವಾಲಯದ ಗರ್ಭಗುಡಿಯ ಹಿಂಭಾಗದ

ಮೂಲೆಯಲ್ಲಿರುವ ಶ್ರೀ ಗಣಪತಿ ವಿಗ್ರಹಕ್ಕ ಬೆಳ್ಳಿಯ ಕವಚವನ್ನು ಮಾಡುವ ಕೆಲಸವು ಸಿಂಗಣ್ಣಾಚಾರ್ಯರ ಪಾಲುಗೆ ಬಂದಿತು. ಈ ಕೆಲಸವನ್ನು ಶ್ರೀಯುತರು ಶ್ರದ್ಧಾಭಕ್ತಿಗಳಿಂದ ಮಾಡಿಕೊಟ್ಟರು. ಹಾಗೆಯೇ ಬೆಳ್ಳಿಯ ಬಾಗಿಲುವಾಡ, ಚಿನ್ನದ ಕಿರೀಟ ಮುಂತಾದುವನ್ನೂ ಬಹಳ ಸುಂದರವಾಗಿ ಇವರು ರಚಿಸಿಕೊಟ್ಟರು. ಈ ಕೆಲಸಗಳಿಂದಾಗಿ ಇವರ ಕೀರ್ತಿ ಹೆಚ್ಚಿತು.

ಒಮ್ಮೆ ಒಂದು ಕುತೂಹಲಕರ ಪ್ರಸಂಗ ನಡೆಯಿತು. ಅರಮನೆಗೆ ಒಂದು ಚಿನ್ನದ ಆಭರಣದ ಅಗತ್ಯ ಇತ್ತು. ಸಿಂಗಣ್ಣಾಚಾರ್ಯರಿಗೆ ಈ ಕೆಲಸವನ್ನು ವಹಿಸಿದರೆ ಕಾಲವಿಳಂಬ ಮಾಡಬಹುದೆಂದು ತಿಳಿದು ಆ ಕೆಲಸವನ್ನು ಬೆಂಗಳೂರಿನ ಪ್ರಸಿದ್ಧ ವರ್ತಕರೊಬ್ಬರ ಕಡೆಯಿಂದ ಮಾಡಿಸಲಾಯಿತು. ಆದರೆ, ಸಿಂಗಣ್ಣಾಚಾರ್ಯರ ಅದ್ಭುತ ಕಲೆಗಾರಿಕೆಯನ್ನು ಕಣ್ಣಾರೆ ಕಂಡಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರಿಗೆ ಈ ಆಭರಣವು ಒಪ್ಪಿಗೆಯಾಗಲಿಲ್ಲ. ಅವರ ಆಜ್ಞೆಯ ಮೇರೆಗೆ ಪುನಃ ಆಭರಣವನ್ನು ಕರಗಿಸಿ, ಸಿಂಗಣ್ಣಾಚಾರ್ಯರಿಂದಲೇ ಮಾಡಿಸಿದರು. ಈ ಕೆಲಸದಿಂದ ಸಿಂಗಣ್ಣಾಚಾರ್ಯರಿಗೆ ಆದ ಅನುಕೂಲವೆಂದರೆ, ಅವರ ಮಗ ಎಸ್.ಎನ್.ಸ್ವಾಮಿಯವರಿಗೆ (ನರಸಿಂಹಸ್ವಾಮಿ) ಕೈಖರ್ಚಿಗಾಗಿ ಐದುನೂರು ರೂಪಾಯಿಗಳನ್ನು ಕೊಡುವುದರ ಜೊತೆಗೆ ಬೊಂಬಾಯಿಯ ಪ್ರಸಿದ್ಧ ಸರ್. ಜೆ.ಜೆ. ಕಲಾಶಾಲೆಯಲ್ಲಿ ಚಿತ್ರಕಲಾಭ್ಯಾಸಕ್ಕಾಗುವ ಸಂಭಾವನೆಯನ್ನು ಕೊಟ್ಟು ಮಹಾರಾಜರು ಪ್ರೋತ್ಸಾಹಿಸಿದರು. ಮಹಾರಾಜರ ಈ ಪ್ರೋತ್ಸಾಹವು ವ್ಯರ್ಥವೂ ಆಗಲಿಲ್ಲ. ಮುಂದೆ ಇದೇ ಎಸ್.ಎನ್. ಸ್ವಾಮಿಯವರು ಕರ್ನಾಟಕದ ಪ್ರಸಿದ್ಧ ಕಲಾವಿದರೂ ಆದರಲ್ಲದೆ, ಭಾರತ ಸರ್ಕಾರದ ಪದ್ಮಶ್ರೀ ಪ್ರಶಸ್ತಿಯನ್ನೂ ಗಳಿಸಿ ಕರ್ನಾಟಕಕ್ಕೇ ಗೌರವವನ್ನು ತಂದರು.

ಭಾರತದ ಖ್ಯಾತ ಕಲಾವಿದರಾಗಿದ್ದ ಕೇರಳದ ರಾಜಾ ರವಿ.

ವರ್ಮರರವರು ಒಮ್ಮೆ ಅರಮನೆಯಲ್ಲಿ ಕೆಲವು ಚಿತ್ರಗಳನ್ನು ರಚಿಸುವುದಕ್ಕಾಗಿ ಮೈಸೂರಿಗೆ ಆಗಮಿಸಿದ್ದರು. ಆ ಸಮಯದಲ್ಲಿ ಸಿಂಗಣ್ಣಾಚಾರ್ಯರಿಗೆ ಮೂವತ್ತು ವರ್ಷ ವಯಸ್ಸು. ಅರಮನೆಯ ಖಜಾನೆಯ ಆವರಣದಲ್ಲಿಟ್ಟಿದ್ದ ನಾಗಗಣಪತಿಯು ಕಲಾವಿದ ರವಿವರ್ಮರ ಕಣ್ಣಿಗೆ ಬಿತ್ತು. ಅದರ ಸೌಂದರ್ಯವನ್ನು, ಅದರ ಕೆತ್ತನೆಯಲ್ಲಿನ ಕೌಶಲ್ಯವನ್ನೂ ಕಂಡ ರವಿವರ್ಮರು ಅದನ್ನು ಕಡೆದ ಶಿಲ್ಪಿಯಾದ ಸಿಂಗಣ್ಣಾಚಾರ್ಯರನ್ನು ಬಹುವಾಗಿ ಪ್ರಶಂಸಿದರು.

ಸಿಂಗಣ್ಣಾಚಾರ್ಯರ ಕೀರ್ತಿಯನ್ನು ಉತ್ತುಂಗಕ್ಕೇರಿಸಬಲ್ಲ ಬಹು ಮುಖ್ಯ ಕಲಾಕೃತಿಗಳೆಂದರೆ, ಮೈಸೂರು ಅರಮನೆಗೆ ಸೇರಿದ ಅಂಬಾರಿ, ಬೆಳ್ಳಿಯ ರಥ ಹಾಗೂ ರತ್ನ ಸಿಂಹಾಸನಗಳೆಂದು ನಿಸ್ಸಂದೇಹವಾಗಿ ಹೇಳಬಹುದು. ನವರಾತ್ರಿಯ ಸಂದರ್ಭದಲ್ಲಿ ಈಗಲೂ ಮೈಸೂರು ಅರಮನೆಯ ರತ್ನ ಸಿಂಹಾಸನದ ದರ್ಶನ ಭಾಗ್ಯವು ಸಾರ್ವಜನಿಕರಿಗೆ ಲಭ್ಯವಿದೆ. ಅದನ್ನು ನೋಡಿದವರು ಅದರ ಸೌಂದರ್ಯಾತಿಶಯಗಳಿಗೆ, ಭವ್ಯತೆ ಅಥವಾ ಅದ್ಭುರಿತನಕ್ಕೆ ಮನಸೋಲದೆ ಇರುವುದು ಸಾಧ್ಯವೇ ಇಲ್ಲ.

ಈ ಅಪೂರ್ವ ಕಲಾ ಕೃತಿಯನ್ನು ನಾಲ್ಕುಸಾವಿರ ತೊಲ ಚಿನ್ನದ ತಗಡಿನ ಹೊದ್ದಿಕೆಯಿಂದ ನಿರ್ಮಿಸಲಾಗಿದೆ. ಒಳ್ಳೆಯ ಕೆತ್ತನೆ ಕೆಲಸದಿಂದ ಹಿಂಬದಿಯ ಗೋಪುರವು ರಂಜಿಸುತ್ತದೆ. ಸಿಂಹಾಸನವನ್ನು ಏರಲು ಅದರ ಬಲಭಾಗದಲ್ಲಿ ನಿರ್ಮಿಸಲಾಗಿರುವ ಮೆಟ್ಟಲುಗಳ ಎರಡೂ ಕಡೆಗಳಲ್ಲಿ ಚಂದನದ ಸುಂದರವಾದ ಗೊಂಬೆಗಳಿವೆ. ಮೇಲ್ಭಾಗದಲ್ಲಿ ಬೆಳ್ಳಿಯ ಕುಸುರಿ ಕೆಲಸ ಮಾಡಿರುವ ಒಂದೊಂದು ಭಾಗವು ಕಲಾಪೂರ್ಣವಾಗಿದೆ ಎನ್ನಲಡ್ಡಿಯಿಲ್ಲ.

ಈ ಸಿಂಹಾಸನದ ನಿರ್ಮಾಣದಿಂದ ನಾಲ್ವಡಿ ಕೃಷ್ಣರಾಜ ಒಡೆಯರ್‌ರವರು ಸಿಂಗಣ್ಣಾಚಾರ್ಯರ ಬಗೆಗೆ ಬಹು ಸುಪ್ರೀತರಾದರು.

## ಇತರ ಕೃತಿಗಳು

ಮಹಾರಾಜರುಗಳ ವರ್ಧಂತಿಯ (ಹುಟ್ಟು ಹಬ್ಬದ) ಸಮಯದಲ್ಲಿ ಉಪಯೋಗಿಸುತ್ತಿದ್ದ, ಸಿಂಗಣ್ಣಾಚಾರ್ಯರು ತಯಾರಿಸಿದ ಬೆಳ್ಳಿಯ ರಥವೂ ರತ್ನಸಿಂಹಾಸನದಷ್ಟೇ ಕಲಾಪೂರ್ಣವಾಗಿದೆ. ಇಷ್ಟೇ ಇಲ್ಲದೆ ಇವರು ಅರಮನೆಗೆ ಸಂಬಂಧಪಟ್ಟ ಅನೇಕ ಆಭರಣಾದಿಗಳನ್ನೂ ಮಾಡಿಕೊಟ್ಟಿದ್ದಾರೆ. ಅವುಗಳಲ್ಲಿ ಅತ್ತರ್ ದಾನ್ ಎ ಜವಾಹಿರಿ ಕೆತ್ತನೆ ಕೆಲಸ ಬಹುಮುಖ್ಯವಾದುದು. ಇದನ್ನು ವಜ್ರ, ಪಚ್ಚೆ, ಕೆಂಪು ಮೊದಲಾದ ಬಹು ಬೆಲೆಬಾಳುವ ಸರಳುಗಳಿಂದ ಮನೋಹರವಾಗಿ ಅಲಂಕರಿಸಿ ರಚಿಸಲಾಗಿದೆ. ಆ ಕಾಲಕ್ಕೆ ಸುಮಾರು ಎರಡು ಲಕ್ಷ ರೂಪಾಯಿಗಳಿಗೂ ಹೆಚ್ಚು ಬೆಲೆಬಾಳುತ್ತಿದ್ದ ಈ ಅಪೂರ್ವ ವಸ್ತುವನ್ನು ಮಹಾರಾಜರು ನವರಾತ್ರಿಯಂಥಹ ಉತ್ಸವಗಳ ಸಮಯದಲ್ಲಿ ಮಾತ್ರ ಉಪಯೋಗಿಸುತ್ತಿದ್ದರು. ಇದೇ ರೀತಿ ಪಾನ್‌ದಾನ್, ಪನ್ನೀರ್‌ದಾನ್ ಮುಂತಾದ ವಸ್ತುಗಳನ್ನು ಕಲಾತ್ಮಕವಾಗಿ ಆಚಾರ್ಯರು ಅರಮನೆಗಾಗಿ ತಯಾರಿಸಿಕೊಟ್ಟಿರುತ್ತಾರೆ. ಅಲ್ಲದೆ ಶ್ರೀ ಚಾಮುಂಡೇಶ್ವರಿ ವಿಗ್ರಹದ ಎಂಟು ಹಸ್ತಗಳಿಗೂ ಆ ಕಾಲದ ಲೆಕ್ಕಾಚಾರದಂತೆ ಸುಮಾರು ಒಂದು ಲಕ್ಷ ರೂಪಾಯಿಗಳಷ್ಟು ಬೆಲೆಬಾಳುವ ಹಸ್ತ ಮತ್ತು ಬಾಹುಗಳ ತೊಡಿಗೆಗಳನ್ನು ಕೆಂಪು, ಪಚ್ಚೆ, ವಜ್ರಾದಿಗಳಿಂದ ಬಹಳ ಆಕರ್ಷಣೀಯವಾಗಿ ತಯಾರಿಸಿಕೊಟ್ಟಿದ್ದಾರೆ.

ರತ್ನಸಿಂಹಾಸನವನ್ನು ತಯಾರಿಸಿದ ತರುಣದಲ್ಲೇ ಮೈಸೂರು ಜಗನ್ಮೋಹನ ಅರಮನೆಯ ಎಡಭಾಗದಲ್ಲಿರುವ ಶ್ರೀ ಪರಕಾಲಸ್ವಾಮಿ ಮಠಕ್ಕೆ ಬೃಹದಾಕಾರದ ಬೆಳ್ಳಿಯ ಮಂಟಪವೊಂದನ್ನು ನಾಲ್ಮಡಿ ಕೃಷ್ಣರಾಜ ಒಡೆಯರು ಶ್ರೀಯುತರಿಂದ ಮಾಡಿಸಿಕೊಟ್ಟರು. ಇದೂ ಸಹ ಒಂದು ಆಕರ್ಷಕವಾದ ಕಲಾಕೃತಿಯಾಗಿದೆ. ಇದರ ಎಡ -ಬಲಗಳಲ್ಲಿ ತ್ರಿಭಂಗಿಯಲ್ಲಿರುವ ಸುಂದರ ದ್ವಾರಪಾಲಕರ ಒಂದೊಂದು ಪಕ್ಕದಲ್ಲಿ ಒಂದೊಂದರಂತೆ ಗರುಡ ಹಾಗೂ ಆಂಜನೇಯರ ಪಾರ್ಶ್ವನೋಟದ

ವಿಗ್ರಹಗಳಿವೆ. ಎದುರಿಗಿನ ದ್ವಾರ ಗೋಪುರಕ್ಕೆ ಸೇರಿದಂತೆ ಶಂಖ ಚಕ್ರಗಳೂ, ನಡುವೆ ವೈಷ್ಣವ ನಾಮವೂ ಇರುತ್ತದೆ. ದೇವರ ಮೂರ್ತಿಯನ್ನು ಕೂರಿಸುವ ಪೀಠದಿಂದ ಕೆಳಭಾಗದ ಅರ್ಧ ದೂರದವರೆಗೆ ಆರು ಮೆಟ್ಟಿಲುಗಳಿವೆ. ಈ ಮೆಟ್ಟಿಲುಗಳು ಸೂಕ್ಷ್ಮ ಕುಸುರಿ ಕೆಲಸದಿಂದ ಕೂಡಿದೆ. ದ್ವಾರಪಾಲಕರ ಎರಡೂ ಪಕ್ಕಗಳಲ್ಲಿ ಸರಳ ಆಕಾರದ ಆದರೆ ಸುಂದರವಾದ ಒಂದೊಂದು ಕಂಬಗಳಿವೆ. ಕವುಚಿರುವ ಅರ್ಧಚಂದ್ರಾಕಾರದ ದ್ವಾರ ಗೋಪುರದ ಮೇಲೆ ಐದು ಕಲಶಗಳಿವೆ. ದೇವತಾ ಮೂರ್ತಿಯನ್ನು ಕೂರಿಸುವ ಪೀಠದ ಮೇಲ್ಭಾಗದಲ್ಲೂ ಮೆಟ್ಟಿಲು ಮೆಟ್ಟಿಲುಗಳಾಗಿ ಮೇಲಿರುವ ಕುಸುರಿ ಕೆಲಸದಿಂದ ಅಲಂಕರಿಸಿರುವ ಸುಂದರವಾದ ಗೋಪುರವನ್ನು ಕಾಣಬಹುದು.

ಮೈಸೂರಿನ ಶ್ರೀ ಶಂಕರಾನಂದ ಭಾರತಿ ಮಠಕ್ಕೆ (ಈಗ ಗೀತ ಮಂದಿರವೆಂದು ಹೆಸರು. ಮೈಸೂರಿನ ಕೇಂದ್ರ ಪೋಲೀಸ್ ಠಾಣೆಯ ಹಿಂಭಾಗದ ಗುಜರಿಯ ಪಕ್ಕದಲ್ಲಿದೆ ) ಶ್ರೀ ಸಿಂಗಣ್ಣಾಚಾರ್ಯರು ಒಂದು ಬೆಳ್ಳಿಯ ಪಾರ್ಥಸಾರಥಿ ರಥವನ್ನು ಮಾಡಿಕೊಟ್ಟಿರುತ್ತಾರೆ. ಉಬ್ಬು ಚಿತ್ರ (ರಿಲೀಫ್) ದಂತಿರುವ ಇದೂ ಸಹ ನೋಡಲು ತುಂಬಾ ಸೊಗಸಾಗಿದೆ. ಎರಡು ಜೋಡಿ ಕುದುರೆಗಳಿಂದ ಎಳೆಯುತ್ತಿರುವಂತೆ ರಚಿಸಲಾಗಿರುವ ಈ ರಥವು ಅಸಾಧಾರಣ ಸೌಂದರ್ಯದಿಂದ ಶೋಭಿಸುತ್ತದೆ. ರಥದ ಮೇಲೆ ಮಂಡಿಸಿರುವ ಪಾರ್ಥನಿಗೆ ಸಾರಥಿಯಾಗಿರುವ ಶ್ರೀ ಕೃಷ್ಣನು ಅಪೂರ್ವ ಶಿಲ್ಪ ಕೃತಿಗಳಲ್ಲಿ ಒಂದು. ಹಿನ್ನೆಲೆಯನ್ನು ವರ್ಣಗಳಿಂದ ಅಲಂಕರಿಸಲಾಗಿದೆ. ರಥದ ಮೇಲ್ಭಾಗದಲ್ಲಿ ಧ್ವಜ ಹಿಡಿದ ಹನುಮಂತನಿದ್ದಾನೆ. ಚಕ್ರದ ಪಕ್ಕದಲ್ಲಿ ಅರ್ಜುನನ ಕೈಯಿಂದ ಜಾರಿದ ಬಿಲ್ಲು ಬತ್ತಳಿಕೆಗಳಿವೆ.

ಮೈಸೂರಿನ ಚಾಮುಂಡಿ ಬೆಟ್ಟದ ಮೇಲಿರುವ ಮೈಸೂರರಸರ ಕುಲದೇವತೆಯಾದ ಶ್ರೀ ಚಾಮುಂಡೇಶ್ವರಿ ದೇವಾಲಯದ ಗರ್ಭಗುಡಿಯ ಬಾಗಿಲವಾಡವೂ ಆಚಾರ್ಯರ ಕಲಾನೈಪುಣ್ಯಕ್ಕೆ ಒಂದು ನಿದರ್ಶನವಾಗಿದೆ.

ಸುಪ್ರಸಿದ್ಧ ವಾಗ್ಗೇಯಕಾರರೂ, ಸಂಗೀತ ವಿದ್ವಾಂಸರೂ ಆಗಿದ್ದ ಶ್ರೀ ಮೈಸೂರು ವಾಸುದೇವಾಚಾರ್ಯರ ವೀಣೆಯ ಮೇಲೆ ಇರುವ ಒಂದು ಅಂಗುಲ ಎತ್ತರದ ಸರಸ್ವತಿಯ ಪುಟ್ಟ ಸುವರ್ಣ ಮೂರ್ತಿಯೂ ಆಚಾರ್ಯರ ಕರಕೌಶಲ್ಯಕ್ಕೆ ಸಾಕ್ಷಿಯಾಗಿದೆ.

## ಬಿರುದು

ತಮ್ಮ ಇಡೀ ಜೀವಿತವನ್ನೇ ಲೋಹಶಿಲ್ಪಕಲೆಗಾಗಿ ತೇದು ಸಾರ್ಥಕ ಪಡಿಸಿಕೊಂಡ ಸಿಂಗಣ್ಣಾಚಾರ್ಯರ ಸೇವೆಯನ್ನು ಗುರುತಿಸಿದ ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರು ಅವರಿಗೆ "ಸ್ವರ್ಣಕಲಾ ನಿಪುಣ" ಎಂಬ ಬಿರುದನ್ನಿತ್ತು ಗೌರವಿಸಿದರು.

ಹೊರದೇಶಗಳಿಗೆ ಹೋಗುವ ಸಂದರ್ಭವೊದಗಿದಾಗಲೂ ಸಹ ನಯವಾಗಿ ನಿರಾಕರಿಸಿದ ನಿರಾಡಂಬರದ ಸರಳ ಜೀವಿಯಾಗಿದ್ದ ಆಚಾರ್ಯರು. ಯಾವುದೇ ಬಿರುದು ಬಾವಲಿಗಳಿಗಾಗಿ ಆಸೆಪಟ್ಟವರಲ್ಲ ಇವರು. " ಸಾವಿರಾರು ತೊಲ ಚಿನ್ನವನ್ನು ಉಪಯೋಗಿಸಿ ಕಲಾಕೃತಿಗಳನ್ನು ನಿರ್ಮಿಸುತ್ತಿದ್ದರೂ ಒಂದು ಕಾಸಿನ ತೂಕದ ಚಿನ್ನಕ್ಕೂ ಆಸೆಪಟ್ಟವರಾಗಿರಲಿಲ್ಲ. ನಮ್ಮ ತಾತ " ಎಂದ ಸಿಂಗಣ್ಣಾಚಾರ್ಯರ ಮೊಮ್ಮಕ್ಕಳಾದ ಶ್ರೀ ಚೆನ್ನಕೃಷ್ಣರವರು ಸ್ಮರಿಸುವಾಗ ಅವರ ಮುಖದಲ್ಲಿ ತಮ್ಮ ತಾತನ ನಿಸ್ವಾರ್ಥತೆಯ ಬಗೆಗಿನ ಗೌರವಭಾವ ಎದ್ದು ಕಾಣುತ್ತದೆ.

## ಕೊನೆಯ ದಿನಗಳು

ಸಿಂಗಣ್ಣಾಚಾರ್ಯರು ತಮ್ಮ ಕೊನೆಯ ದಿನಗಳಲ್ಲೂ ತುಂಬಾ ಆರೋಗ್ಯದಿಂದಲೇ ಇದ್ದವರು. ಸಣ್ಣ ಪುಟ್ಟ ದೈಹಿಕ ತೊಂದರೆಗಳನ್ನು ಅವರು ತಮಗೆ ತಿಳಿದ ಆಯುರ್ವೇದದ ಲೇಹ್ಯ, ಭಸ್ಮ, ಚೂರ್ಣಾದಿಗಳನ್ನು ಬಳಸಿ ನಿವಾರಿಸಿಕೊಳ್ಳುತ್ತಿದ್ದರೇ ಹೊರತು ಒಂದು ದಿನವಾದರೂ ವೈದ್ಯರನ್ನು ಭೇಟಿಯಾದವರಲ್ಲ. ಹೆಚ್ಚೇಕೆ, ತಮ್ಮ ಕಣ್ಣಿಗೆ ಸರಿಹೊಂದುವ

ಕನ್ನಡವನ್ನೂ ಸಹ ಬೀದಿಯ ಕನ್ನಡಕ ವ್ಯಾಪಾರಿಗಳಲ್ಲಿಗೆ ಹೋಗಿ "ತಪ್ಪು ಸರಿ ವಿಧಾನದಿಂದ" ( ಟ್ರಯಲ್ ಅಂಡ್ ಎರರ್ ಮೆಥಡ್) ಆಯ್ಕೆ ಮಾಡಿಕೊಳ್ಳುತ್ತಿದ್ದರಂತೆ. ನೇತ್ರವೈದ್ಯರನ್ನು ಭೇಟಿಯಾಗಿ, ಪರೀಕ್ಷೆ ಮಾಡಿಸಿಕೊಂಡು ಸರಿಯಾದ ಕನ್ನಡಕವನ್ನು ತೆಗೆದುಕೊಳ್ಳಬಾರದೇ? ಎಂದು ಯಾರಾದರೂ ಕೇಳಿದರೆ, "ನೇತ್ರವೈದ್ಯರು ತಮ್ಮ ಆಧುನಿಕ ಉಪಕರಣಗಳ ಸಹಾಯದಿಂದ ತಪ್ಪು ಸರಿ ವಿಧಾನವನ್ನು ಅನುಸರಿಸಿಯೇ ಕನ್ನಡಕವನ್ನು ಸೂಚಿಸುವುದು" ಎಂದೆನ್ನುತ್ತಿದ್ದರಂತೆ!

ತೊಂಬತ್ತನೆಯ ವರ್ಷದಲ್ಲೂ ಆಚಾರ್ಯರ ದೃಷ್ಟಿ ಬಹು ಚುರುಕಾಗೇ ಇತ್ತು. ಗಟ್ಟಿಪದಾರ್ಥಗಳನ್ನು ಲೀಲಾಜಾಲವಾಗಿ ಅಗಿಯಬಹುದಾದಂತಹ ಸದೃಢ ಹಲ್ಲುಗಳು ಆ ವಯಸ್ಸಿನಲ್ಲೂ ಅವರಿಗಿದ್ದವು. "ಕಲಾಸೇವೆಗೆ ಆರೋಗ್ಯಕರವಾದ ದೇಹವು ಅತಿ ಮುಖ್ಯ" ಎಂಬ ವಿಚಾರವನ್ನು ಪ್ರತಿಪಾದಿಸುತ್ತಿದ್ದ ಆಚಾರ್ಯರು ತಮ್ಮ ಶರೀರದ ಆರೋಗ್ಯವನ್ನು ಕೊನೆಯುವರೆಗೂ ಚೆನ್ನಾಗೇ ಕಾಪಾಡಿಕೊಂಡು ಬಂದಿದ್ದರು.

ಆಧ್ಯಾತ್ಮದಲ್ಲಿ ಆಳವಾದ ಅನುಭವವನ್ನು ಪಡೆದುಕೊಂಡಿದ್ದ ಇವರು ಒಳ್ಳೆಯ ವಿಚಾರಶೀಲರೂ, ವಿನಯಸಂಪನ್ನರೂ, ಸತ್ಯಸಂಧರೂ ಆಗಿದ್ದರು. ಶಿಲ್ಪಕಲೆಯ ಬಗ್ಗೆ ಬಹು ಗಾಢವಾದ ಜ್ಞಾನ ಇವರಿಗಿತ್ತು. ಸದಾ ನಗುಮೊಗದಿಂದಿರುತ್ತಿದ್ದ ಇವರು ಹೆಚ್ಚಾಗಿ ಯಾರ ಸಂಪರ್ಕವನ್ನೂ ಇಟ್ಟುಕೊಂಡವರಲ್ಲ. ಆದರೆ, ಭೇಟಿಗೆ ಬಂದವರನ್ನು ಇವರು ಸತ್ಕರಿಸುತ್ತಿದ್ದ ರೀತಿಯು ಇವರ ಹೃದಯ ವೈಶಾಲ್ಯವನ್ನೂ, ಸುಸಂಸ್ಕೃತಿಯನ್ನೂ ವ್ಯಕ್ತಪಡಿಸುತ್ತಿತ್ತು.

"ಒಮ್ಮೆ (1957ರಲ್ಲಿ) ಸಿಂಗಣ್ಣಾಚಾರ್ಯರನ್ನು ನಾನು ಸಂದರ್ಶನ ಮಾಡಿದಾಗ ಇವರೊಡನೆ ಕಳೆದ ಸಮಯ ಮರೆಯುವಂತಹುದ್ದಲ್ಲ. ಆಚಾರ್ಯರು ಮುಚ್ಚುಮರೆಯಿಲ್ಲದೆ ಸತ್ಯನುಡಿಯುವವರಾಗಿದ್ದರು.

ತಮ್ಮ ಪುತ್ರ ಎಸ್.ಎನ್.ಸ್ವಾಮಿಗಳ ಕಲೆಯ ಬಗ್ಗೆ ಅವರ ಅಭಿಪ್ರಾಯವೇನೆಂದು ಕೇಳಿದಾಗ ಅವರು ನೀಡಿದ ಉತ್ತರ ಇದಕ್ಕೆ ನಿದರ್ಶನ. ಮೈಸೂರಿನಲ್ಲೇ ಇದ್ದ ಅದೇ ಹೆಸರಿನ ಇನ್ನೊಬ್ಬರು ಸ್ವಾಮಿಯನ್ನು ಇವರು ನೆನೆಸಿಕೊಂಡು ಅವರ ಚಿತ್ರಕಲೆಯನ್ನು ಮೆಚ್ಚಿಕೊಂಡರು. ಕಲಾವಿಮರ್ಶೆಯ ವಿಚಾರದಲ್ಲಿ ಇವರು ತಮ್ಮ ಮಗನನ್ನೇ ಆದರೂ ವಹಿಸಿಕೊಂಡು ಮಾತನಾಡಲಿಲ್ಲ" ಎಂಬುದಾಗಿ ಖ್ಯಾತ ಕಲಾವಿದ ಶ್ರೀ ಪಿ.ಆರ್.ತಿಪ್ಪೇಸ್ವಾಮಿಯವರು ತಮ್ಮ "ಸ್ವರ್ಣಕಲಾ ನಿಪುಣ ಸಿಂಗಣ್ಣಾಚಾರ್ಯ" (ಮಾನವೀಯ ಕರ್ನಾಟಕ ಸಂಪುಟ ೬ ಸಂಚಿಕೆ ೧, ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ 1975) ಎಂಬ ಕಿರುಪುಸ್ತಕದಲ್ಲಿ ಶ್ಲಾಘಿಸಿದ್ದಾರೆ.

ಆಚಾರ್ಯರು ತಮ್ಮ ಮುಪ್ಪಿನಲ್ಲೂ ಸಹ ಕೈಲಾಗದೆಂದು ಸುಮ್ಮನೆ ಕುಳಿತವರಲ್ಲ, 1954 ರಲ್ಲಿ ಚಕ್ರಪಾಣಿ, ನಾಗಭೂಶಣಸ್ವಾಮಿ ಮುಂತಾದ ಪ್ರತಿಮೆಗಳನ್ನೂ, 1956 ರಲ್ಲಿ ಚಿನ್ನದ ಸುಂದರವಾದ ಉಮಾಮಹೇಶ್ವರ ವಿಗ್ರಹವನ್ನೂ ತಯಾರಿಸಿದರು. 1957 ರಲ್ಲಿ ಭರತಪುರದ ಮಹಾರಾಜರಿಗಾಗಿ ರಾಮ ಲಕ್ಷ್ಮಣ ಸೀತಾದಿಗಳಿರುವ ಪ್ರತಿಮೆಯನ್ನು ನಿರ್ಮಿಸಿದರು. ಮೈಸೂರು ಅರಮನೆಗಾಗಿ ರಚಿಸಿದ ಕಂಚಿನ ಭುವನೇಶ್ವರಿ ಹಾಗೂ ಗಾಯತ್ರೀ ವಿಗ್ರಹಗಳು ಆಚಾರ್ಯರ ಕೊನೆಯ ಶಿಲ್ಪಕಲಾ ಕೊಡುಗೆಗಳು.

ಸಿಂಗಣ್ಣಾಚಾರ್ಯರ ಮಕ್ಕಳು ಅಥವಾ ಮೊಮ್ಮಕ್ಕಳಲ್ಲಿ ಯಾರೂ ತಮ್ಮ ವಂಶಪಾಪಂಪರ್ಯವಾಗಿ ಬಂದ ಲೋಹಶಿಲ್ಪಕಲೆಯಲ್ಲಿ ಮುಂದುವರೆಯದೆ ಹೋದರೂ, ಇತರ ಅರ್ಹ ಅಸಕ್ತರಿಗೆ ಇವರು ತಮ್ಮ ಮನೆಯಲ್ಲೇ ನಿರ್ವಂಚನೆಯಿಂದ ಶಿಲ್ಪಕಲಾಭ್ಯಾಸ ಮಾಡಿಸುತ್ತಿದ್ದರು.

ಈ ಕಲಾ ತಪಸ್ವಿಯು ತಮ್ಮ ೯೨ನೇ ತುಂಬು ವಯಸ್ಸಿನಲ್ಲಿ ೧೯೬೭ನೇ ಇಸವಿಯ ಫೆಬ್ರುವರಿ ತಿಂಗಳಲ್ಲಿ ಕೀರ್ತಿಶೇಷರಾದರು. ಆದರೆ, ತಮ್ಮ ಕಲಾಕೃತಿಗಳಿಂದಾಗಿ ಇವರು ಅಮರರಾಗಿದ್ದಾರೆ.

# ಶ್ರೀ ಸಿಂಗಣ್ಣಾಚಾರ್ಯರ ಕೆಲವು ಪ್ರಮುಖ ಕಲಾಕೃತಿಗಳು

**ಮೈಸೂರು ಅರಮನೆಯಲ್ಲಿ**

ಚಿನ್ನದ ಸಿಂಹಾಸನ, ಚಿನ್ನದ ಅಂಬಾರಿ, ಬೆಳ್ಳಿಯರಥ, ನವರತ್ನ ಖಚಿತ ಅತ್ತರುದಾನಿ, ದಸ್ತಾನು. ಇತ್ಯಾದಿ.

**ಚಾಮುಂಡಿ ಬೆಟ್ಟದಲ್ಲಿ**

ಬೆಳ್ಳಿಯ ಬಾಗಿಲುವಾಡ, ಗರುಡಗಂಬ, ಬೆಳ್ಳಿಯ ಗೋಪುರ, ಮಂಟಪ, ದೇವರುಗಳಿಗೆ ಕವಚ ಹಾಗೂ ವಾಹನಾದಿಗಳು.

**ಪರಕಾಲಸ್ವಾಮಿ ಮಠದಲ್ಲಿ**

ಬೆಳ್ಳಿಯ ಬಾಗಿಲು ವಾಡಗಳು, ಕವಚಗಳು, ಚಿನ್ನದ ರತ್ನ ಖಚಿತ ಶ್ರೀಕಂಠಮುಡಿ ಕಿರೀಟ.

**ತ್ರಿನೇಶ್ವರ ದೇವಾಲಯದಲ್ಲಿ**

ಸಾವಿರತೊಲ ಚಿನ್ನದ ಜಟಾಮಕುಟ ಹಾಗೂ ಅನೇಕ ಬೆಳ್ಳಿ ಕವಚಗಳು.

**ಮಹದೇಶ್ವರ ಬೆಟ್ಟದಲ್ಲಿ**

ಬೆಳ್ಳಿಯ ವೃಷಭವಾಹನ, ಸಾವಿರತೊಲಕ್ಕೂ ಹೆಚ್ಚಿನ ತೂಕದ ಚಿನ್ನದ ಮಹದೇಶ್ವರ ದೇವರ ಜಟಾಮಕುಟ ಹಾಗೂ ಇನ್ನೂ ಹಲವು ಕೆಲಸಗಳು.



ಸ್ವರ್ಣಕಲಾ ನಿಪುಣ ಸಿಂಗಣ್ಣಾ ಚಾರ್ಯ
*Swarnakala Nipuna Singannacharya*



(ಮೊದಲನೆಯವರು) ಸಿಂಗಣ್ಣಾಚಾರ್ಯ, ಅರಮನೆಯ ಆಡಳಿತಗಾರರೊಂದಿಗೆ

*(Left First) Singannacharya with Administrators*



ಮೈಸೂರು ಅರಮನೆಯ ಚಿನ್ನದ ಅಂಬಾರಿ
*Mysore Palace Golden Ambari*



ಮೈಸೂರಿನ ರಾಜಗುರುಮಠ ಪರಕಾಯಮಠದ ಶಿಲ್ಪಕೃತಿ ತಮ್ಮ
ಶಿಷ್ಯರೊಂದಿಗೆ ಆಚಾರ್ಯರು

*Mysore Rajagurumath Parakayamath Sculpture with his Students*



ಬೆಳ್ಳಿಯ ಸಾರೋಟ
Silver Saroot



ಮೈಸೂರು ಅರಸರ ಚಿನ್ನದ ಸಿಂಹಾಸನ

*Mysore King's Golden Simhasan*



ಕೃಷ್ಣಾರ್ಜುನರ ಬೆಳ್ಳಿ ರಥ ಅಥವಾ ಪಾರ್ಥಸಾರಥಿ ಬೆಳ್ಳಿರಥ

*Krishnarjuna's Silver Chariat or Parthasarathi Silver Chariat*



ಜಂಬೂ ಸವಾರಿ
*Jamboo Savari*

# Shilpi Singannacharya

The name Mysore at once brings to our mind, the grand palace of the Maharaja, the Chamundi Hills and the celebrated Navaratri (Dasara) festival. The climax of these world-famous festivals is the "Jambo Savari" of the Maharaja. That procession is today a thing of the past. But the grandeur of that event is sure to linger in the memories of the passing generation.

It is difficult to describe the "Jambo Savari" in which the Maharaja would ride a caparisoned elephant in a procession from the Palace to the Banni Mantap on a decorated seat.

The brilliance of the Ambari (decorated seat), on which the Maharaja would be sitting is an eye-filling sight. This unique Ambari covered with gold sheets weighing 6000 tolas (at 10gms a tola) is beautiful in its construction. It has three deftly carved pillars on each of the four sides. It is covered with a canopy resembling a crown. There are five sacred "Kalashas" on top of it. The seat itself is made of silver, alluring designs embellishing it. The grandeur then is unparalleled indeed.

Not many are bothered to think of the creators of such an imposing Ambari which is the very symbol of the Maharaja's glorious heritage. That sculptor hence has remained incognito. Let it however be known that he was Singannacharya.

Mysore was the native place of this famous metal sculptor. An imposing structure opposite the temple dedicated to the five faced Anjaneya on the Irvin Road was his residence. It is on the left side of the road as you pass along the Chamaraja Technical Institute (KAVA), a short distance towards the Janata Bazar. It was referred to as the bungalow of S.N.Swamy(S. Narasimhaswamy) who was decorated with "Padma Shri" . He was a well- known

artist of Karnataka. He was the only son of Singannacharya.

Singannacharya had inherited the art of metal sculpting. His father, Narasimhacharya and uncle Singanna were sculptors in the Mysore Palace. If Narasimhacharya is credited with creating the gold filigreed umbrella for the Tirupati deity, Singanna had the distinction of creating a silver sculpture of Mummadi Krishnaraja Wodiyar. The two forebears of Singannacharya, with their attainment in the arts have enhanced the reputation of the family.

## Childhood

It is natural that one develops a taste in a matter to which he is instantly exposed to in his childhood. Which means the environment has its impact an the human mind. Singannacharya grew in an artistic atmosphere. Besides metal sculpture was verily part of the family activity. Thus, there is nothing strange if he was consumed by that art.

It is said that behind the Chamaraja Technical Institute on the Sayyaji Rao Road, there was a settlement of people belonging to the 'Viswakarma' community. Singannacharya's father, Narasimhacharya also had a house in that locality.

The father's ambition was to see that Singannacharya became a reputed sculptor. The mother not only concured with the husband, but lent active support for the fulfilment of that objective. Thus the home itself became the school of sculpture for Singannacharya. His childhood was entirely directed in the pursuit of art. The fact that the neighbourhood was full of artists could also have contributed in creating an ideal atmosphere for his flowering as a sculptor.

## Craze for Drama

Popular movements usually attract the attention of young minds. This is especially so if the mind is a creative one. Singannacharya was no exception. The art of theatre lured him when he was eight years of age. A new theatre troupe had been founded at about the same time in Dodpet (the present Ashoka Road), Singannacharya became a member of the troupe and started taking part in its productions. It must be conceded that he also made a name in the field. Those who witnessed his acting had all praise for his talent and encouraged him too. A Christian journal of the period had published a photograph of his and commended his acting abilities.

## Family life

Singannacharya lost his father when he was barely 10. At an age when he should have been engaged in learning and playing, he had to bear the burden of family responsibility.

Theatre activity was not such a profitable proposition. His mother who knew that it cannot be a means of livelihood, did not allow him to while away time in theatre. However, the question of an alternative was no problem for him. He always had the family tradition of metal sculpting. He decided to pursue the same.

## Fickle Minded

Apparently, Singannacharya was not of a steady mind. It wavered all the time. It is true that he had decided to involve himself completely in sculpture. At the same time, he would take time off to learn music. It is learnt that he was a student of Vidwan Channanjappa and Krishnaraja of Tanjore.

For one who has a family responsibility, it won't be possible to think of things other than his profession. If one did divert his attention to other pursuits, it won't be surprising if he is disillusioned. The reason for such failure in the first place may

be lack of time and for another inability to concentrate in the midst of family problems.

Maybe it is in similar circumstances that Singannacharya's craze for music slowly diminished. But an interest in philosophy took its place. Side by side with this, his interest in sculpture also re-doubled itself.

There is reason for the two pursuits to be complementary to each other. In our country an indelible relationship between sculpture and philosophy is discernible right through the times. The ultimate objective of sculpture, according to our puranas is to create beautiful idols of gods and goddesses. Any temple in the land is a manifestation of this truth. However during the days of Singannacharya, it was a common belief that the fulfilment of sculpture was the creation of well-propotioned, ornate idols.

A sculptor who is well versed in philosophy besides his accomplishment in sculpting, would naturally dedicate himself to sculpting idols of gods. The heavenly charm with which such idols glitter is proof of such a devotional approach in him. The story of Singannacharya is not much different from

this. Once his interest developed in philosophy, he progressively started withdrawing himself from worldly matters. Besides he started evincing greater interest in listening to puranas and working on sculpting in seclusion.

## Helping Hand

After the demise of his father, Singannacharya was certainly not reduced to a state of penury. Cheluvachar, a relation had come to his aid.

When he was 12 years of age, he had started accompanying his uncle Singanna to the palace to execute odd jobs. Thus his association with the palace began from his early years. With the result he got his father's job there. Like this he not only had a livelihood, but was also able to apply himself seriously for the study of fine arts.

It was at that time that he had an opportunity to prepare the silver frame for a door in the palace. It was an opportunity for him to gain experience. Meanwhile, in his 16th year, he also got married and entered the life of a householder.

Singannacharya's mother was always deeply

interested in puranas and myths. She was in a way responsible for his own inclination towards them. As it has happened in the case of Chatrapathi Shivaji and his mother Jeejabai, Singannacharya's mother was not only his guru, but was also instrumental in his prosperity. Instances are not wanting where mothers have accounted in more then one way for the success of their sons.

Some time in the year 1990, the well-known philosopher saint of Bangalore, Swami Sahajananda was sojourning in the Kalappa Math in Nazarbad of Mysore. Having come to know about it, Singannacharya started frequenting the Swamiji to enrich his knowledge of philosophy by discussing with him. Thus with his mother on the one side and Saahajananda on the other, he gathered enough knowledge about philosophy so as to reorient his own life. Visitors to his house on the Irwin Road at the time would have seen the large number of books on philosophical subjects he had acquired.

With this philosophical background Singannacharya's life was one of principals adhering to higher values. He was of the opinion that it was his philosophic studies that had helped

him to develop a dedicated approach to sculpture. That was absolutely correct too. After all is not the progenitor for sculpture, Vishwa Karma a divine sculptor? In the same way there is no sculpting without philosophy.

## Mother's demise

Often times a single incident in the life of a man may change the very direction of his life style. While he was a youth of only 28, Acharya lost his mother. The shock obviously created a deep impact on him. Shattered by the separation of his affectionate mother, he became disgusted with life. Hoping that a change of place night bring solace to his embittered mind, he left Mysore for Hubli. In the presence of Siddharuda Swami, he settled down in that town engrossed in philosophical contemplation.

His relations in Mysore came to know that the Acharya had become an inmate of a math in Hubli. Perturbed, they proceeded to Hubli and after a great deal of persuassion, succeeded in getting him back to Mysore. By that time more than three months had lapsed in the absence from his work in the palace. However, his services were not

discontinued, thanks to the good offices of the Mokhtesar of the Treasury who was well disposed towards him.

After returning from Hubli, there was a sense of peace and steadiness in Acharya's routine. He seemed determined to settle down so as to involve himself completely in his art.

Meanwhile, the palace deputed Singannacharya to get advanced training in modeling in the Govt. School of Arts and Crafts in Madras. But he found that there was little to benefit from that visit. All the same, a bitter experience was in store for him. The head of the institution there was awe-struct by the Acharya's talent and craftsmanship. But instead of encouraging him on that account, he become jealous of him. With the result, Acharya returned to Mysore after a short stay of 2-3 months. Petty jealousies are nothing new among professionals. But there are exceptions too.

On return from Madras, Singannacharya was entrusted with the job of preparing a silver covering to the Ganesh idol in the precincts of the historic Nanjundeswara temple of Nanjangud. He executed the job with due devotion and dedication.

Likewise, he worked on a beautiful silver door frame and a gold crown for the temple. These works won him the esteem of the people concerned.

There was an interesting incident at the time. The palace was in need of a golden jewellery. Thinking that Singannacharya might not finish the job in time, the authorities got it done by a well-known businessman of Bangalore. But Krishnaraja Wadiyar the Fourth, who had seen the deft craftsmanship of Singannacharya didn't approve of it. According to his orders, the piece was re-made by the Acharya. The immediate advantage Acharya derived from this work is that he was able to pay Rs.500 for the pocket expenses of his son, S.N.Swamy who was to proceed to Bombay to study fine arts at the J.J.School on the recommendation and financial assistance of the Maharaja. The royal patronage did not go waste as Swamy in due course emerged as one of the most noted artists of the State, winning the coveted "Padma Shri" recognition from the Union Government to bring honour to Karnataka.

The well-known Indian artist Raja Ravi Verma

of Kerala was once on a visit to Mysore to paint some works in the palace. Singannacharya was about 30 years of age at the time. The beautiful idol of Naga Ganapathi in the premises of the palace treasury attracted the attention of the royal artist. Admiring its magnetic charm and the deft way it was sculpted, Ravi Verma was full of praise for the Acharya's craftsmanship.

But the works that brought Singannacharya irrefutable fame were the palace Ambari, silver palanguin and the gold throne. Even today people have a view of that incomparable gold throne and those who view it cannot escape its artistic beauty, grandeur and excellence. This unique work of art has a covering made of 4000 tolas of gold.

The "Vimana" at the back glitters with enchanting designs. The two rows of stairs on the sides of the throne are lined by beautifully carved dolls in sandalwood, filigreed designs in the rest of the area enriching the artistic beauty of the piece. The Maharaja, Krishnaraja Wadeyar the Fourth was highly pleased with this great work of Singannacharya.

## His other works

The silver chariot used in the procession on the occasion of the Maharaja's birthday celebrations is another significant contribution of Singannacharya, It is as artistic as the golden throne. Besides he has designed innumerable ornaments for the palace. Among them an "Attar Daana" (perfume container), deserves mention. This artefact, is geniously carved and studded with sapphires, rubies, and is a precious Jewel. At that time it cost a little over Rs. two lakh. The Maharaja used it sparingly, only at the time of festivals like the Dasara.

Likewise, the Acharya has created a "Pan daan", "Pannir daan" and such other utility pieces. As artistic are the "hastha" and "bhuja" (palm and shoulder) ornaments for the eight armed Chamundeswari, the palace deity. Studded with expensive stons like rubies and saphires, these worked out at Rs. one lakh each at that time.

At about the same time when the Acharya had worked on the golden throne, the Maharaja got made a massive silver mantap for the Parakala Math. That is also a masterpiece, dotting on either

side of it the figures of "Dwara Palakas". By their side can be seen the figures of Garuda and Anjaneya in profile. The Vaishnavite symbols of "Shankha" (conch) "Chakra" (wheel) and the "Namam" decorate the top "Gopura" of the entrance . There are six steps leading to the pedestal made for the deity. They are also full of filigreed designs. Two columns on either side of the Dwara Palakas, support the edifice, which is covered by a semi-circular arch. Five "Kalashas" are arranged atop the arch. Even above the pedestal. is discernible the multi-tiered gopura which is full of delicate designs of exquisite beauty.

Singannacharya has designed a silver chariot for the Shankarananda Bharathi Math which is situated in the vicinity of the Mysore City Central Police Station. The Math is at present known as "Gita Mandir". In the fashion of a relief, and seemingly drawn by two horses, it is of exquisite beauty. It has the familiar setting of Krishna as the charioteer of the Pandava Prince Arjuna, preaching the Gita to the latter. On top of the chariot is Arjuna's banner sporting the figure of Hanuman. By the side of it can be seen the bow and arrows slipped down from Arjuna's hands. It is undoubtedly another of Acharya's masterpieces.

The door frame to the shrine of the temple dedicated to the family deity of the Wadiyars, Chamundeswari atop the hill is another example of Acharya's artistic skill. The same can be said of the tiny 8 inch high gold idol of goddess Saraswathi that adorns the veena of the renowned vocalist and compose Mysore K.Vasudevacharya.

## Awards

As one who had dedicated his whole life to the art of metal sculpture, Singannnacharya was the recepient of innumerable honours. One of the most coveted of them all is the title of "Swarna Kala Nipuna" conferred on him by Maharaja Jaya Chamaraja Wadiyar.

The Acharya was so humble and unassuming that he had rejected a few offers to go abroad. Nor did he go after any recognition or honours. "Through he often worked with gold weighing several tolas, my grandfather was never greedy to possess even a gram of that metal", his grandson Chinni Krishna says as he respectfully reminisces the purposeful life of his grandfather.

Singannacharya unreservedly imparted lessons in the art to aspiring students.

This dedicated artist passed away in his 92nd year in February 1967, to remain immortal through his masterpieces.



## ಲಲಿತಕಲಾ ಅಕಾಡೆಮಿಯ ಹೊಸ ಪ್ರಕಟಣೆಗಳು

1) ಇಂಪ್ರೆಷನಿಸಂ
- *ಅ.ಲ. ನರಸಿಂಹನ್* ರೂ. ೧೫

2) ಎಕ್ಸ್‌ಪ್ರೆಶನಿಸಂ
- *ಚಿ.ಸು. ಕೃಷ್ಣಸೆಟ್ಟಿ* ರೂ. ೧೫

3) ಕೇರಳದ ವರ್ಣಚಿತ್ರಲೋಕ
- *ವೆಂಕಟರಾಜ ಪುಣಿಚಿತ್ತಾಯ*
- *ಪಿ.ಎಸ್. ಪುಣಿಚಿತ್ತಾಯ* ರೂ. ೧೦

4) ಪಿ. ಸುಬ್ಬರಾವ್
- *ಎಂ.ಎಸ್. ನಂಜುಂಡರಾವ್* ರೂ. ೧೦

5) ಸಿಂಗಣ್ಣಾಚಾರ್ಯ
- *ಜಿ.ವಿ. ಗಣೇಶಯ್ಯ* ರೂ. ೧೦

6) ಹೆಚ್.ವೆಂಕಪ್ಪ
- *ಹೆಚ್.ಎಸ್. ಘಾಟಕ್* ರೂ. ೧೦

7) ಎಂ.ಎಸ್. ಚಂದ್ರಶೇಖರ್
- *ಯು.ಎಸ್. ವೆಂಕಟರಾಮನ್* ರೂ. ೧೦

8) ಗಂಗರ ಶಿಲ್ಪಕಲೆ
- *ಡಾ. ದೇವರ ಕೊಂಡಾರೆಡ್ಡಿ* ರೂ. ೫

9) ಕರ್ನಾಟಕದಲ್ಲಿ ಆಧುನಿಕ ಶಿಲ್ಪ
- *ಕೆ.ವಿ. ಸುಬ್ರಹ್ಮಣ್ಯ* ರೂ. ೫

10) ಶಿವಾನಂದ ಪಿ. ಅಕ್ಕಿ
- *ವಿ.ಟಿ. ಕಾಳೆ* ರೂ. ೧೦

11) ಪಾಶ್ಚಾತ್ಯ ದೃಶ್ಯ ಕಲಾವಿದರು
- *ಎನ್. ಮರಿಶಾಮಾಚಾರ್* ರೂ. ೧೦

12) ಶಿಲ್ಪಕಲಾ ಪ್ರಪಂಚ
ಸಂ. - *ಅ.ಲ. ನರಸಿಂಹನ್* ರೂ. ೧೦
- *ಎನ್. ಮರಿಶಾಮಾಚಾರ್*

---

ಮೇಲ್ಕಂಡ ಎಲ್ಲಾ ಪುಸ್ತಕಗಳ ಪ್ರಧಾನ ಸಂಪಾದಕರು

**ಪಿ.ಆರ್. ತಿಪ್ಪೇಸ್ವಾಮಿ**